# ತತ್ವಜ್ಞಾನಿ
# ಸರ್ಪಭೂಷಣ ಶಿವಯೋಗಿ

-ಬಿ.ಎಸ್. ಸ್ವಾಮಿ



Rs 15/00

ತತ್ತ್ವಜ್ಞಾನಿ

# ಸರ್ಪಭೂಷಣ ಶಿವಯೋಗಿ

B. C. Chikkamath

ಬಿ. ಎಸ್. ಸ್ವಾಮಿ

ಪ್ರಕಾಶಕರು :
ಶ್ರೀ ಸರ್ಪಭೂಷಣ ಶಿವಯೋಗೀಶ್ವರಮಠ
ಬೆಂಗಳೂರು-೯.

# ಸರ್ಪಭೂಷಣ ಶಿವಯೋಗಿಗಳು

(ಶ್ರೀ ಸರ್ಪಭೂಷಣ ಶಿವಯೋಗಿ ಗ್ರಂಥಮಾಲೆಯ ತೃತೀಯ ಕುಸುಮ)

ಪ್ರಕಾಶಕರು :
ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳವರು ಎಂ. ಎ.
ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧ್ಯಕ್ಷರು.
ಶ್ರೀ ಸರ್ಪಭೂಷಣ ಶಿವಯೋಗಿಗಳ ಮಠ
ಮೆಜೆಸ್ಟಿಕ್ ವೃತ್ತ, ಬೆಂಗಳೂರು-೯.

ಪ್ರಥಮ ಮುದ್ರಣ ೧೯೭೪



ಕಲೆ : ಜಿ. ಕೆ. ಸತ್ಯ.

ಬೆಲೆ ₹ 15/00

ಮುದ್ರಕರು :
ಶ್ರೀ ಭಾವನಾ ಪ್ರೆಸ್
೪೧, ತೋಟದೇವರಗಲ್ಲಿ, ಅರಳೇಪೇಟೆ,
ಬೆಂಗಳೂರು—೫೬೦೦೫೩

# ಮುನ್ನುಡಿ

ಶ್ರೀ ಬಿ. ಎಸ್. ಸ್ವಾಮಿ ಅವರ ಕೈ ಬರೆಹದ "ಸರ್ಪಭೂಷಣ ಶಿವಯೋಗಿಗಳು" ಎಂಬ ಹೊತ್ತಗೆಯನ್ನು ಇವರಿಂದಲೇ ಓದಿಸಿ ಕೇಳಿದೆವು. ಇವರ ವ್ಯಕ್ತಿ ಚಾರಿತ್ರ್ಯದ ಹೊತ್ತಗೆ ಇರಲಿಲ್ಲ. ಈ ಕೊರತೆಯನ್ನು ಇವರು ತಂದು ತುಂಬಿದ್ದಾರೆ. ಇವರ ಆಡು ಮಾತಿನ ಶೈಲಿ ತುಂಬಾ ಮನ ಮೋಹಕವಾಗಿದೆ. ಕಥನ ಶೈಲಿ ಸೊಗಸಾಗಿದೆ. ಅಲ್ಲಲ್ಲಿ ವಿಷಯೋಚಿತವಾಗಿ ಪದ್ಯಗಳನ್ನು ಜೋಡಿಸಿದ ಜಾಣ್ಮೆ ಮೆಚ್ಚತಕ್ಕುದು.

ಇದು ಬೇಗ ಅಚ್ಚಾಗಿ ಓದುಗರ ಕೈ ಸೇರುವಂತಾಗಲೆಂದು ಹಾರೈಸೋಣವಾಗಿದೆ.

ಡಾ|| ಜ. ಚ. ನಿ.

# ಪ್ರಕಾಶಕರ ನುಡಿ

ಕನ್ನಡನಾಡಿನ ಈ ಪುಣ್ಯಭೂಮಿಯಲ್ಲಿ ಅನೇಕ ಮಹಾಪುರುಷರು, ಶಿವ ಯೋಗಿ ಪುಂಗವರು. ಕಾಲ-ಕಾಲಕ್ಕೆ ಉದಯಿಸಿ ಅಜ್ಞಾನದ ಕೋಟಲೆ ಯಲ್ಲಿ ಕಷ್ಟಪಡುವ ಮಾನವರ ಬದುಕಿಗೆ ಜ್ಞಾನದ ಬೆಳಕನ್ನೂ ಕೊಟ್ಟು ಸನ್ಮಾರ್ಗದಲ್ಲಿ ನಡೆದು ನಿತ್ಯ ಸುಖವನ್ನು ಪಡೆಯುವಂತೆ ಮಾಡಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಥಮರು ಬಗೆ ಬಗೆಯ ಭಾವಭರಿತ-ವಚನಗಳನ್ನು ಹಾಡಿ ಕನ್ನಡ ನುಡಿಗೆ ಹೆಚ್ಚಿನ ಪಾವನತೆ ಯನ್ನು ತಂದರು ಹಾಗೂ ಅದರಲ್ಲಿ ಜೀವ ಕಳೆಯನ್ನು ತುಂಬಿ ಸಜೀವ ಸಾಹಿತ್ಯವನ್ನಾಗಿ ಮಾಡಿದರು. ವೀರಶೈವ ಸಾಹಿತ್ಯವು ಶಿವಶರಣರ ಆಳವಾದ ಅನುಭವದಿಂದ ಹೆಮ್ಮರವಾಗಿ ಬೆಳೆದು ನಿಂತಿದೆ. ಅನೇಕ ಶಿವಯೋಗಿಗಳ ಈ ಅನುಭವ ಸಾಹಿತ್ಯವನ್ನು ಸ್ವತಂತ್ರವಾಗಿ ಹಾಡಿ ಹಾಡುಗಳ ಹೊಳೆಯನ್ನೇ ಹರಿಸಿದ್ದಾರೆ. ಶ್ರೀ ಸರ್ಪಭೂಷಣ ಶಿವಯೋಗಿಗಳು ಶ್ರೀನಿಜಗುಣ ಶಿವಯೋಗಿ ಗಳ ಕೈವಲ್ಯ ಪದ್ಧತಿಯನ್ನನುಸರಿಸಿ ಕೈವಲ್ಯ ಕಲ್ಪವಲ್ಲರಿಯನ್ನು ರಚಿಸಿದರೂ ಅದರಲ್ಲಿ ತಮ್ಮದೇ ಆದ ಅನುಭವ, ತತ್ತ್ವ ಜ್ಞಾನಗಳನ್ನೂ ಸ್ವತಂತ್ರವಾಗಿ ಪ್ರತಿಬಿಂಬಿಸಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ಸಾಸುವೆ ಕೊರೆದು ಸಾಗರವನ್ನು ಹೊಗಿಸುವಂತೆ. ಕಿರಿ-ಕಿರಿದಾದ ಶಬ್ದಗಳಲ್ಲಿ ಹಿರಿದಾದ ಅರ್ಥ ವನ್ನು ಹುದುಗಿಸುವ ಸಾಹಸ ಮಾಡಿದ್ದಾರೆ. ಅವರ ಹಾಡುಗಳಲ್ಲಿ ಭಾಷಾ-ಪಾಂಡಿತ್ಯ, ಶಬ್ದವೈಖರಿ, ಭಾವಾವೇಶ, ರಸಪುಷ್ಟಿ, ಆದಿ-ಅಂತ್ಯ ಪ್ರಾಸಗಳ ಜೋಡಿಕೆ-ಹಾಗೂ ಸರಸ ಸಂಗೀತ, ರಾಗ; ತಾಳ, ಆದಿಗಳು ಶ್ರೀ ಸರ್ಪಭೂಷ ಣರ ವ್ಯಕ್ತಿತ್ವವನ್ನು ಸ್ಫುಟಗೊಳಿಸಿವೆ ಮತ್ತು ಕನ್ನಡ ಸಾಹಿತ್ಯವನ್ನು ಅಮರ ಸಾಹಿತ್ಯವನ್ನಾಗಿ ಮಾಡಿವೆ

ಶಿವಯೋಗಿಗಳಿಗೆ ಕನ್ನಡದಲ್ಲಿ ಆಳವಾದ ಪಾಂಡಿತ್ಯ ಇರುವಂತೆ ಅಳತೆಗೆ ಸಿಲುಕದಷ್ಟು ಪಾಂಡಿತ್ಯ ಸಂಸ್ಕೃತದಲ್ಲಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಅವರ ಸಂಸ್ಕೃತ ಪಾಂಡಿತ್ಯಕ್ಕೆ "ಜ್ಞಾನ ಶತಕಂ" ಎಂಬ ಗ್ರಂಥ ನಿದರ್ಶನವಾ ಗಿದೆ. ಇಂತಹ ಮಹಾ ಮಹಿಮರ ಜೀವನ ಪರಿಚಯ ಮಾಡಿಕೊಳ್ಳುವುದು ಪುಣ್ಯಪ್ರದ ಹಾಗೂ ಅವಶ್ಯಕವಾದುದು.

ತರುಣ ಕವಿಗಳೂ ಉತ್ಸಾಹೀ ಸಾಹಿತಿಗಳೂ ಈಗಾಗಲೇ ಹಲವಾರು ಕಾದಂಬರಿ, ನಾಟಕ, ಕವನ ಸಂಕಲನ, ಜೀವನ ಚರಿತ್ರೆ, ಮುಂತಾದ ಹೊತ್ತಿಗೆ

ಗಳನ್ನು ಬೆಳಕಿಗೆ ತಂದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಸ್ಥಾನವನ್ನು ಕಾದಿರಿಸಲು ಪ್ರಯತ್ನಿಸುತ್ತಿರುವ ಶ್ರೀ ಬಿ. ಎಸ್. ಸ್ವಾಮಿ ಅವರು ನಮ್ಮ ಅನೇಕ ದಿನಗಳ ಹಂಬಲದಂತೆ ಶ್ರೀ ಸರ್ಪಭೂಷಣ ಶಿವಯೋಗಿಗಳ ಸಂಕ್ಷಿಪ್ತ ಜೀವನ ಪರಿಚಯುವನ್ನು ಬರೆದು ಕೊಡುವ ಭರವಸೆಯನ್ನಿತ್ತುದರ ಪರಿಣಾಮ ವಾಗಿ "ತತ್ತ್ವಜ್ಞಾನಿ ಶ್ರೀ ಸರ್ಪಭೂಷಣ ಶಿವಯೋಗಿ" ಎಂಬ ಪ್ರಸ್ತುತ ಗ್ರಂಥವು. ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯ ಮೂರನೆಯ ಕುಸುಮವಾಗಿ ಅವರ ಜಯಂತಿಯ ಸುಸಂದರ್ಭದಲ್ಲಿಯೇ ಪ್ರಕಾಶ ಹೊಂದುತ್ತಿ ರುವುದು ಸಂತೋಷದ ಸಂಗತಿಯಾಗಿದೆ.

ಶ್ರೀ ಬಿ. ಎಸ್. ಸ್ವಾಮಿ ಅವರು ಈಗ ಉಪಲಬ್ಧವಾದ ಸಾಮಗ್ರಿಗಳಿಂದ ತಮ್ಮದೇ ಆದ ಸುಲಭ ಶೈಲಿಯಲ್ಲಿ ಶಿವಯೋಗಿಗಳ ಸಂಕ್ಷಿಪ್ತ ಜೀವನ ಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಪ್ರಗತಿ ಪರವಾದ ಅವರ ಸಾಹಿತ್ಯ ಸೇವೆಯು ಶ್ರೀ ಸರ್ಪಭೂಷಣ ಶಿವಯೋಗೀಶ್ವರರ ಕೃಪೆಯಿಂದ ಇತೋಪ್ಯತಿಶ ಯವಾಗಿ ಬೆಳೆದು ಬೆಳಗಲೆಂದು ಹಾರೈಸುತ್ತೇವೆ.

ಈ ಹೊತ್ತಿಗೆಯ ಮುದ್ರಣದ ವೆಚ್ಚವನ್ನು ಗುರು-ಲಿಂಗ ಜಂಗಮಾರಾ ಧಕರೂ, ದಾಸೋಹಂಭಾವಿಗಳೂ ಎಲೆಯ ಮರೆಯ ಕಾಯಿಯಂತೆ ಇದ್ದು ಶ್ರೀ ಮಠಕ್ಕೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಿರುವ ಶ್ರೀಮಾನ್ ಕೆ. ಬಿ. ದೊಡ್ಡರಾಜಪ್ಪ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಭಾಗೀರಥಮ್ಮ, ಮಾಮೂಲ್ ಪೇಟೆ ಬೆಂಗಳೂರು. ಅವರು ಸುಸಂತೋಷದಿಂದ ವಹಿಸಿಕೊಂಡಿ ದ್ದಾರೆ. ಅವರಿಗೂ ಅವರ ಸಕಲ ಪರಿವಾರದವರಿಗೂ ಶ್ರೀ ಶಿವಯೋಗಿಗಳ ಆಶೀ ರ್ವಾದವು ಸದಾ ಇರಲೆಂದು ಮನದುಂಬಿ ಹಾರೈಸುತ್ತೇವೆ. ಗ್ರಂಥದ ಈ ಮುದ್ರಣ ಕಾರ್ಯವನ್ನು ಅತಿ ಶೀಘ್ರವಾಗಿ ಅಚ್ಚುಮೆಚ್ಚಾಗಿ ಮಾಡಿ ಮಾಡಿಕೊಟ್ಟ ಶ್ರೀ ಭಾವನಾ ಪ್ರೆಸ್ ಎನ್. ವೆಂಕಟಪ್ಪನವರಿಗೂ ಮತ್ತು ರಕ್ಷಾ ಪುಟದ ಚಿತ್ರವನ್ನು ಚಿತ್ರಿಸಿಕೊಟ್ಟ ಶ್ರೀ ಜಿ ಕೆ. ಸತ್ಯ ಅವರಿಗೂ ಶ್ರೀ ಶಿವ ಯೋಗಿಗಳ ಕೃಪೆ ಇರಲೆಂದು ಆಶಿಸುತ್ತೇವೆ

ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸರ್ಪಭೂಷಣ ಮಠ, ಬೆಂಗಳೂರು-೯

## ಪಂಡಿತ ಶ್ರೀ ನಾಗಭೂಷಣ ಶಾಸ್ತ್ರೀ ಅವರ ದೃಷ್ಟಿಯಲ್ಲಿ ಈ ಕೃತಿ

---

ನಾನು ಸಮಗ್ರವಾಗಿ ಓದಿಸಿ ಕೇಳದಿದ್ದರೂ ಅಲ್ಲಲ್ಲಿ ಓದಿದ ಸಂದರ್ಭಗಳನ್ನು ಕೇಳಿ ಸಂತೋಷಪಟ್ಟೆನು. ಲೇಖಕರು ಬಹಳ ಸರಸವಾಗಿ ವಿಷಯ ಪ್ರತಿಪಾದನೆ ಮಾಡಿದ್ದಾರೆ. ಈ ಹೊತ್ತಿಗೆಯು ಇಂದಿನ ಶಿಕ್ಷಣ ಪಡೆದವರ ಮನಸ್ಸನ್ನು ಅರಳಿಸುವಂತಹದಾಗಿದೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಇದೊಂದು ಕೃತಿ ಉತ್ತಮ ಕಾಣಿಕೆಯಾಗಿ, ಲೇಖಕರಿಂದ ಸಿದ್ಧವಾಗಿರುವುದು ತುಂಬ ಸಂತಸದಾಯಕ. ಶ್ರೀ ಬಿ. ಎಸ್. ಸ್ವಾಮಿಯವರು ಇತೋಪ್ಯತಿಶಯವಾಗಿ ಲೇಖನ ಕಲೆಯಲ್ಲಿ ಪ್ರಗತಿ ಸಾಧಿಸಿ ಕನ್ನಡ ಲೇಖಕರಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುವರೆಂದು ನಂಬಿರುವೆ.

ನಾಗಭೂಷಣಶಾಸ್ತ್ರಿ
'ಸಾವಧಾನ' ಸಂಪಾದಕರು, ಧಾರವಾಡ.

# 'ಪುಲಿಕೇಶಿ' ಅವರ ದೃಷ್ಟಿಯಲ್ಲಿ...

"ತತ್ತ್ವಜ್ಞಾನಿ ಸರ್ಪಭೂಷಣ ಶಿವಯೋಗಿ" ನನಗೆ ಅತ್ಯಂತ ಪ್ರಿಯವಾದ ನಾಮಾಂಕಿತ ; ಆ ದಿವ್ಯನಾಮವನ್ನು ಕೇಳಿದರೇ ಕಿವಿ ನಿಮಿರುವುದು. ಅದು ಅವರದೇ ಆದ ಅನುಗ್ರಹ.

ನನ್ನ ಬಂಧು ಶ್ರೀ ಬಿ. ಎಸ್. ಸ್ವಾಮಿ ಅವರು 'ಸಪ್ಪಣ್ಣಪ್ಪ' ನವರನ್ನು ಕುರಿತು ಕೃತಿ ರಚಿಸುವುದಾಗಿ ಹೇಳಿದಾಗ ತುಂಬಾ ಸಂತೋಷವಾಯಿತು. ಬರೆದ ಕರಡು ಪ್ರತಿಯನ್ನು ನನ್ನೆದುರು ಓದಿದಾಗ ಕೃತಿನಾಯಕ–ಕೃತಿಕಾರರಿಬ್ಬರನ್ನೂ ಏಕ ಕಾಲದಲ್ಲಿಯೇ ಸಂದರ್ಶಿಸಿದಂತಾಯಿತು. ಸ್ವಾಮಿಯವರ ಬರೆಹದುದ್ದಕ್ಕೂ ಶಿವಯೋಗಿಗಳು ಸಮಕ್ಷಮವಲ್ಲಿ ಸಂವಾದಿಸುತ್ತಿದ್ದಾರೆಯೋ ಎನ್ನಿಸಿತು. ಪುಟ ಪುಟಕ್ಕೆ ಕುತೂಹಲವನ್ನು ಕೆರಳಿಸುತ್ತಾ ಹೃದಯವನ್ನು ಅರಳಿಸುತ್ತಾ ಹೋಗುತ್ತದೆ, ಕೃತಿ.

'ಭುವನದ ಭಾಗ್ಯ' ದಿಂದ ಅವತಾರ ಮಾಡಿದ ಸಪ್ಪಣ್ಣ, ಶಿವಾಂಶ–ಸಂಭೂತ ಶ್ರೀ ಗುರುಸಿದ್ಧ ಗುರುವರನ ಪೂರ್ಣಾನುಗ್ರಹಕ್ಕೆ ಪಕ್ಕಾಗಿ "ಯೋಗೀಶನ ಸಿರಿಗೆಣೆಯುಂಟೆ?" ಎನ್ನುವ ಮಹದಂಶವನ್ನು ಮನಗಂಡು, "ಶ್ರೀ ಗಿರಿಯು ಶರೀರದೊಳಗುಂಟು"—ಈ ಗುಟ್ಟನ್ನು ಅರಿಯುವ ಎತ್ತರಕ್ಕೇರಿದ ಶಿವಯೋಗಿಯಾಗಬೇಕಾದರೆ ಅದೇನು ಸಾಮಾನ್ಯ ಸಾಧನೆಯಲ್ಲ.

ಕೇವಲ ಯತೀಶ್ವರನು ಮಾತ್ರವಾಗಿರದೆ, ಹುಟ್ಟಿದ ಮನೆಯಿಂದ ಹಿಡಿದು ಮಹಾಮನೆ ಮುಟ್ಟುವವರೆಗೂ ಸಾಮಾಜಿಕ ಸುಧಾರಣೆ ಮಾಡಿದ ರೀತಿಯನ್ನು ಮನಬಾಗುವಂತೆ ಚಿತ್ರಿಸಿ ಯಶಸ್ವಿಯಾಗಿದ್ದಾರೆ—ಈ ಕೃತಿಕಾರರು. ಇವರ ಬಿಡುವಿಲ್ಲದ ಲೇಖನಿಯಿಂದ ಇಂತಹ ಮಹಾನುಭಾವರ ಜೀವಿತ ಚಿತ್ರಗಳು ಇನ್ನೂ ಬಹು ಸಂಖ್ಯೆಯಲ್ಲಿ ಹೊರಬರಲೆಂದು ಹೃದಯಾರೆ ಹಾರೈಸುತ್ತೇನೆ.

ತಾ|| 21-1-1974
ಮೊಕ್ಕಾಂ: ಬೆಂಗಳೂರು

ಪ್ರೊ|| ಕೆ. ಪಿ. ಶಿವಲಿಂಗಯ್ಯ
ಎಂ. ಎ., ಬಿ. ಇಡಿ., ಅಧ್ಯಾಪಕರು
ಜೆ.ಎಸ್. ಎಸ್. ಕಾಲೇಜು, ಮೈಸೂರು-4

ಈ ಕಿರು ಹೊತ್ತಗೆಯು
ತತ್ತ್ವಜ್ಞಾನಿ

# ಸರ್ಪಭೂಷಣ ಶಿವಯೋಗಿಗಳ

ಪಾದ ಪದ್ಮಂಗಳಲ್ಲಿ ಅರ್ಪಿತ



ಶ್ರೀ ಸರ್ಪಭೂಷಣ ಶಿವಯೋಗಿಗಳು ಬೆಂಗಳೂರು

ಜನನ ಕ್ರಿ. ಶ. ೧೭೯೫ ಲಿಂಗೈಕ್ಯ : ಕ್ರಿ. ಶ. ೧.೮೩೮

# ಸರ್ಪ ಭೂಷಣ ಶಿವ ಯೋಗಿಗಳು



ಶ್ರಾವಣ ಮಾಸದ ಮೊದಲ ಶುಕ್ರವಾರದ ಶುಭ ದಿನ! ಬೆಂಗಳೂರು ಜಿಲ್ಲೆಯ ಚಿಕ್ಕಬಾಣಾವಾರದಿಂದ ಚೆನ್ನಮ್ಮ ಮತ್ತು ಮಲ್ಲಿಕಾರ್ಜುನಪ್ಪ ದಂಪತಿಗಳು ಶಿಪ್ಪಶೆಟ್ಟರ ಮಠದ ಚರಮೂರ್ತಿಗಳಾದ ಗುರುಸಿದ್ಧ ಸ್ವಾಮಿಗಳ ದರುಶನ ಮಾಡುವ ಉದ್ದೇಶದಿಂದ ಹಣ್ಣು ಕಾಯಿ, ಹೂವು, ಎಳನೀರು ಎಲ್ಲವನ್ನೂ ಸಿದ್ಧಮಾಡಿಕೊಂಡು ಎತ್ತಿನ ಬಂಡಿಯನ್ನು ಕಟ್ಟಿಸಿಕೊಂಡು ಬೆಳಗ್ಗೆ ಏಳು ಘಂಟೆಯ ಹೊತ್ತಿಗೆ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು. ಕೆಂದೆತ್ತುಗಳನ್ನು ಮನೆಯ ಆಳು ಸಿದ್ಧ ಚೆನ್ನಾಗಿ ಸಾಕಿದ್ದ. ನಿರಾಯಾಸವಾಗಿ ಎತ್ತುಗಳು ಒಂದೇ ಸಮನೆ ಸಾಗಿದುವು. ಮಲ್ಲಿಕಾರ್ಜುನಪ್ಪನವರ ಮಕ್ಕಳು ಶಾಂತಪ್ಪ, ಮಲ್ಲಿಶೆಟ್ಟಪ್ಪ, ಹುಚ್ಚಣ್ಣ, ಮಲ್ಲಮ್ಮ ಮತ್ತು ಮೂರು ವರ್ಷದ ಸಪ್ಪಣ್ಣ ಎಲ್ಲರೂ ಗೆಲುವಿನಿಂದ ಕುಳಿತಿದ್ದಾರೆ. ಸಪ್ಪಣ್ಣ ತನ್ನ ಬಾಲಲೀಲೆಯೊಂದಿಗೆ ದಾರಿಯುದ್ದಕ್ಕೂ ಎಲ್ಲರನ್ನೂ ನಗಿಸುತ್ತಾ ಆಡುತ್ತಾ ಇದ್ದಾನೆ. ಮನೆಯಲ್ಲೇ ಇದ್ದ ಮಗುವಿಗೆ ಹೊರಗಿನ ಪ್ರಕೃತಿ ಹೊಸ ಚೇತನವನ್ನು ತುಂಬಿದಂತಾಗಿತ್ತು. ಮಗುವಿನ ಗುಲ್ಲೋ ಗುಲ್ಲು. ಅದರ ತೊದಲು ಮಾತು ಎಲ್ಲರನ್ನೂ ಸಂತಸಗೊಳಿಸಿತು. ಗಾಡಿ ಓಡುತ್ತಿದ್ದಂತೆಯೇ ಮಗುವಿನ ಮನಸ್ಸು ಗುರುವಿನ ದರ್ಶನಕ್ಕೆ ಓಡುವಂತಿತ್ತು. ಸುಮಾರು ಹತ್ತು ಘಂಟೆಯ ವೇಳೆಗೆ ಗಾಡಿ ಗುರುಮಠವನ್ನು ತಲುಪಿತು.

ಗುರುಗಳು ಶಿವಪೂಜೆಗಾಗಿ ಹೂವುಗಳನ್ನು ಬಿಡಿಸುತ್ತಿದ್ದರು. ಗಾಡಿಯಿಂದ ಇಳಿಯುತ್ತಿದ್ದ ಸಂಸಾರವನ್ನು ನೋಡಿದ ಗುರುಸಿದ್ಧಸ್ವಾಮಿಗಳು—

"ಬನ್ನಿ....ಬನ್ನಿ......ಮಲ್ಲಿಕಾರ್ಜುನಪ್ಪನವರೇ..." ಎಂದು ಸ್ವಾಗತಿಸಿದರು.

"ಅಡ್ಡ ಬಿದ್ದೆ ಬುದ್ಧಿ...ಅಡ್ಡ ಬಿದ್ದೆ"

—ಎಂದು ಎಲ್ಲರೂ ಬಂದು ಗುರುಗಳಿಗೆ ಸಾಷ್ಟಾಂಗವೆರಗುತ್ತಿರುವಂತೆ ಗುರುಗಳು,

"ಎಲ್ಲಾ ಸೌಖ್ಯ ತಾನೇ ?" ಎಂಬ ನಾನಾ ಕುಶಲ ಪ್ರಶ್ನೆಗಳನ್ನು ಹಾಕಲು,

"ಇಷ್ಟು ಮಾತ್ರ ಬುದ್ಧಿ" ಎಂದರು ಮಲ್ಲಿಕಾರ್ಜುನಪ್ಪನವರು.

ಸಪ್ಪಣ್ಣ ತೊದಲ್ನುಡಿಯಲ್ಲೇ ಮಾತನಾಡಿಸುವುದರಲ್ಲಿದ್ದುದನ್ನು ನೋಡಿ ಗುರುಗಳು—

"ಏನು...ಬಲು ಜೋರಾಗಿದ್ದೀಯಲ್ಲಾ ಏನು ನಿನ್ನ ಹೆಸರು ?"

"ಸಪ್ಪಣ್ಣ ಅಂತ ಬುದ್ಧಿ" ಎಂದು ದನಿ ಗೂಡಿಸಿದರು ಚೆನ್ನಮ್ಮನವರು.

"ಹೆಸರು ಸಪ್ಪಣ್ಣನಾದರೂ...ಸಪ್ಪೆಯಲ್ಲ."

"ಉಪ್ಪಣ್ಣ ಬುದ್ಧಿ" ಎಂದ ಪಕ್ಕದಲ್ಲಿ ನಿಂತಿದ್ದ ಅಣ್ಣ ಶಾಂತಪ್ಪ. ಎಲ್ಲರೂ ನಗಲಾರಂಭಿಸಿದರು. ಗುರುಗಳು ಎಲ್ಲರನ್ನೂ ಉದ್ದೇಶಿಸಿ,

"ನಡೆಯಿರಿ......ಎಲ್ಲಾ ಕೈ ಕಾಲು ಮುಖ ತೊಳ್ಕೊಂಡು ಪ್ರಸಾದ ಸ್ವೀಕರಿಸುವಿರಂತೆ"

"ಇಲ್ಲ ಬುದ್ಧಿ ಬೆಳಗ್ಗೆ ಎದ್ದು ರೊಟ್ಟಿ ತಿಂದುಕೊಂಡೇ ಎಲ್ಲರೂ ಬಂದಿದ್ದಾರೆ. ಮೊದಲು ನಿಮ್ಮ ಪಾದಪೂಜೆ ಆಗಬೇಕು, ಆದಮೇಲೆ ಮಿಕ್ಕ ಮಾತುಗಳು, ಕೆಲಸಗಳು"

—ಎನ್ನಲು ಗುರುಗಳು ಅರಳಿದ ನಗುವಿನೊಡನೆ ಮುಂದಾದರು ಅವರನ್ನು ಮಿಕ್ಕೆಲ್ಲರೂ ಹಿಂಬಾಲಿಸಿದರು.

ಪಾದ ಪೂಜೆ, ಕಟ್ಲೆ, ಪ್ರಸಾದವನ್ನು ತೆಗೆದುಕೊಂಡರು. ಅಷ್ಟು ಹೊತ್ತಿಗೆ ಮಧ್ಯಾಹ್ನ ಮುಂದಾಗಿತ್ತು. ಎಲ್ಲರೂ ಸ್ವಲ್ಪ ಹೊತ್ತು ಒಂದು ಕೊಠಡಿಯಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳಲಾರಂಭಿಸಿದರು. ಮಠದ ಸುತ್ತಲೂ ವೀರಶೈವ ವೇದಾಂತ ತತ್ವಗಳನ್ನು ನಿರೂಪಿಸುವ ವಿವಿಧ ಬಣ್ಣದ ಚಿತ್ರಗಳು, ಮೂವತ್ತೆರಡು ಉದ್ಧರಣೆಗಳು, ಲಿಂಗಾಂಗ ಸಮೀಲನ್ನು ತೋರಿಸುವ ಚಿತ್ರಗಳು ಅಂದವಾಗಿ ರಚಿಸಿದ್ದುವು.

ಸುಮಾರು ನಾಲ್ಕು ಘಂಟೆಯ ಸಮಯ ನಿದ್ದೆ ಎಲ್ಲರಿಗೂ ಮುಗಿಯುತ್ತಿದ್ದಂತೆಯೇ ಚನ್ನಮ್ಮನವರು—

"ಸಪ್ಪಣ್ಣಾ...ಸಪ್ಪಣ್ಣಾ....ಹಾವು...ಹಾವು..." ಎಂದು ಕಣ್ಮುಚ್ಚಿ ಕೊಂಡೇ ಕೂಗಲಾರಂಭಿಸಿದರು. ಎಲ್ಲರೂ ಎದ್ದರು. ಗುರುಗಳು ನೋಡಿದರು.

"ಏನಾಯ್ತು....ಏನಾಯ್ತು....!" ಎಂದು ನಾನಾ ವಿಧವಾಗಿ ಪ್ರಶ್ನಿಸು ತ್ತಿರುವಲ್ಲಿ ಚೆವತ ಚನ್ನಮ್ಮನವರು ಎಲ್ಲರನ್ನೂ ದಿಗ್ಭ್ರಮೆಯಿಂದ ನೋಡಲಾ ರಂಭಿಸಿದರು. ಮಗು ಕೇಕೆ ಹಾಕುತ್ತಲೇ ಇತ್ತು.

"ಏನು...ಚೆನ್ನಮ್ಮ....ಹಾವು...ಹಾವು....ಸಪ್ಪಣ್ಣ....ಅಂತ ಕೂಗಿ ಕೊಳ್ತಾ ಇದ್ದೀರಿ?"

"ಬುದ್ಧಿ....ಏನೋ ಕೆಟ್ಟ ಕನಸು"

"ಏನಮ್ಮ...?"

"ಹಾವು ಕಂಡರೆ ಸಾವು ಅನ್ತಾರೆ.........ನನಗೆ ಹೇಳಲಿಕ್ಕೆ ಬಾಯಿ ಬರ್ತಾ ಇಲ್ಲ."

"ಅದೇನು ಹೆದರಬೇಡ ಹೇಳಮ್ಮ ಗುರುಮಠದಲ್ಲಿ ಹಾವನ್ನು ಕಂಡರೆ ಬಹಳ ಒಳ್ಳೆಯದೆಂದೆ ಭಾವಿಸಿ ಹೇಳಿ"

"ಸಪ್ಪಣ್ಣನ ತಲೆಯಮೇಲೆ ಸರ್ಪ ಹೆಡೆಬಿಚ್ಚಿ ಆಡ್ತಾ ಇತ್ತು..."

"ಬಹಳ ಒಳ್ಳೆಯ ಶುಭ ಸೂಚನೆ, ರಾಜಯೋಗ ಇದೆ ಅಂತ್ಲೇ ಅರ್ಥ ನೀವೇನೂ ಹೆದರಬೇಡಿ ಚೆನ್ನಮ್ಮನವರೇ, 'ಸರ್ಪ ಭೂಷಣ' ಅನ್ನೋ ಹೆಸರು ನಿಜವಾಗಿಯೂ ಸಾರ್ಥಕವಾಗಿದೆ" ಮಲ್ಲಿಕಾರ್ಜುನಪ್ಪನವರು.

"ಏನೂ ಅಡ್ಡಿಯಿಲ್ಲವೇ ಬುದ್ಧಿ"

"ನೀವೇನೂ ಯೋಚನೆ ಮಾಡಬೇಡಿ. ಎಲ್ಲಾ ಆ ದೇವರಮೇಲೆ ಭಾರ ಇಟ್ಟು ಒಮ್ಮನಸ್ಸಿನಿಂದ ಇರಿ"

"ಆಗಲಿ..."

—ಎಂದು ಎಲ್ಲರೂ ತಲೆದೂಗಿದರು.

ಮಲ್ಲಿಕಾರ್ಜುನಪ್ಪನವರು ಗುರುಗಳನ್ನುದ್ದೇಶಿಸಿ,

"ಬುದ್ಧಿ ನಾವು ಸಾಯಂಕಾಲ ಹೊರಡುತ್ತೇವೆ. ತಾವು ನಮ್ಮೂರಿಗೆ ಯಾವತ್ತು ದಯಮಾಡಿಸ್ತೀರಿ ?"

"ಈಗೇನಂತೆ ನಾಳೆ ಬೆಳಿಗ್ಗೆ ಹೋಗಿ, ಮಠದ ವಾತಾವರಣದಲ್ಲಿ ಒಂದು ದಿನವಾದ್ರೂ ಇದ್ದು ರಾತ್ರಿಯಾಗುವ ಪೂಜೆ ನೋಡಿಕೊಂಡು, ಪ್ರಸಾದ

ತೆಗೆದುಕೊಂಡು ಹೋಗುವಿರಂತೆ, ನಾನು ಸಾಧ್ಯವಾದಾಗ, ನೀವು ಯಾವ ಹೊತ್ತು ಬನ್ನಿ ಅಂತೀರಿ ಆ ಹೊತ್ತು ಬರ್ತೀನಿ."

"ಆಗಲಿ ಬುದ್ಧಿ..."

—ಎಂದು ಅಂದು ಪೂಜೆ, ಭಜನೆಗಳಲ್ಲಿ ಭಾಗವಹಿಸಿ ಪ್ರಸಾದ ಸ್ವೀಕರಿಸಿ ಮರುದಿನ ಗುರುಗಳಿಗೆ ಹೇಳಿ ಚಿಕ್ಕಬಾಣಾವರಕ್ಕೆ ಹೊರಟರು.

‡ ‡ ‡ ‡ ‡

ದಿನಗಳುರುಳಿದಂತೆ ಸರ್ಪಭೂಷಣನು ಉದಯೋನ್ಮುಖ ಬಾಲಕನಾಗಿದ್ದಾನೆ. ಆತನ ಆಟ...ಕೇಳಬೇಕೇ? ಮೊದಲೇ ಹುಡುಗ...! ಚೇಷ್ಟೆ.... ಆಟ ವಿಪರೀತ! ಮಿತ್ರ ಬಾಲಕರಿಂದ ತಂದೆ–ತಾಯಿಗಳಿಗೆ ನಾನಾರೀತಿಯ ವರದಿಗಳು ಬರಲಾರಂಭಿಸಿದುವು.

ಮಲ್ಲಿಕಾರ್ಜುನಪ್ಪನವರು ಅಂದು ಹೊಲದಿಂದ ಬರುತ್ತಿದ್ದಂತೆಯೇ

"ಏನೂ ಅಂದ್ರೇ...."

"ಅದೇನೆ ಚೆನ್ನ ನಿನ್ನ ರಾಗ?"

"ನಿಮ್ಮ ಮಗ ಸರ್ಪಭೂಷಣನ ವಿಚಾರ"

"ಏನಂತೆ? ಅವನ್ಗೆ ತಿಂದೆಚ್ಚಿರ್ಬೋದು. ಅದ್ಕೆ ಅಂಗಾಡ್ತಾ ಅವ್ನೆ ಅಂತ ಕಾಣಿಸ್ತೈತೆ"

"ನಂಗೂ ಅಕ್ಕಪಕ್ಕದವರ ಮಾತ್ ಕೇಳಿ ಸಾಕಾಗೋಯ್ತು ಹೋಗಿ"

"ಒಂದು ಶಾಲೆಗೆ ಹಾಕೋಣ ಅಂದ್ರೂ ಆಗ್ಲಿಕ್ಕಿಲ್ಲ. ಅವನ್ಗೆ ಓದೋಕು ಮನಸ್ಸೆ ಇಲ್ಲ ಅಂತ್ಲೇ ಅನ್ಸುತ್ತೆ."

"ಅವನ್ನ......ಈ ಪೋಲಿ ಹುಡುಗರ ಜೊತೆ ಸೇರೋದ ಸ್ವಲ್ಪ ಕಮ್ಮಿ ಮಾಡಬೇಕು. ಇಲ್ದೇಹೋದ್ರೆ ಅವ್ನು ಒಂದು ಹದಕ್ ಬರಕ್ಕಿಲ್ಲ."

"ಸುಮ್ಗೆ ಬೆಂಗಳೂರಿನ ಗುರುಸಿದ್ಧ ಸ್ವಾಮಿಗಳ ಮಠಕ್ಕೆ ಯಾಕೆ ಸೇರಿಸ್ಬುಡ್ಬಾರ್ದು?"

"ಅದೂ ಒಳ್ಳೆ ಉಪಾಯವೇ, ಹಾಗೇ ಮಾಡೋಣ, ಹ್ಯಾಗಾದ್ರೂ ಮುಂದಿನ ವಾರಕ್ಕೆ ಪಾದಪೂಜೆ ಇಟ್ಕಂಡಿವ್ಯಲ್ಲಾ, ಆಗ ಬರ್ತಾರಲ್ಲ ಆಗ್ಲೇ ವಿಚಾರ ಮಾಡಿ ಯೇನಾದ್ರೂ ಒಂದು ವ್ಯವಸ್ಥೆ ಮಾಡಬೇಕು. ಅಂಗೇ

ಅವ್ನಾದ್ಹಾಗೆ ಬಿಟ್ಬಿಟ್ರೆ ಆಗೋಕಿಲ್ಲ ಅಕ್ಕ ಪಕ್ಕದವರಿಗೆಲ್ಲಾ ಉತ್ತರ ಹೇಳಿ ಹೇಳಿ ನಂಗಂತೂ ಸಾಕಾಗೋಗ್ಯೆತೆ."

"ಅದೋ ನೋಡಿ ಬರ್ತಾ ಅವ್ನೇ ನೋಡಿ ಕುಲಪುತ್ರ."

ಮಲ್ಲಿಕಾರ್ಜುನಪ್ಪನವರು ಮಗನನ್ನುದ್ದೇಶಿಸಿ–

"ಸಪ್ಪಣ್ಣಾ....ಬಾ ಇಲ್ಲಿ"

"ಏನಪ್ಪಾಜಿ ?"

"ಏನಯ್ಯಾ ನಿನ್ನ ತೀಟೆ ಹೆಚ್ಚಾಗ್ಬುಟ್ಟೆದ್ಯಂತಲ್ಲಾ ಹ್ಯಾಗೆ ಸಮಾಚಾರ? ನಾವ್ಯೇನಾ ಮೊಕ ಮುಚ್ಕೊಂಡು ಈ ಚಿಕ್ಕಬಾಣಾವಾರದಲ್ಲಿ ಇರಬೇಕು ಅಂತಿಯೋ, ದೇಶಾಂತ್ರ ಹೊರಟೋಗ್ಬೇಕು ಅಂತೀಯೋ ಹ್ಯಾಗೆ? ಸ್ವಲ್ಪ ಹೇಳು..."

"ಅಲ್ಲಕಣಪ್ಪಾ ನಾ ಯೇನ್ ತಪ್ ಮಾಡ್ದೆ ಅಂತ ?"

"ಅಲ್ಲ ಕಣೋ ಪಕ್ಕದ ಮನೆ ಶಿವನಿಗೆ ಚೆಂಡಿನಲ್ಲಿ ಹೊಡದು ಮೊಗಳ್ ತಗದ್ಬುಟ್ಟಿದ್ದೀಯಂತಲ್ಲಾ ಏನು ಸಮಾಚಾರ? ಅವರ್ಗೆಲ್ಲಾ ಉತ್ತರ ಹ್ಯಾಳ್ಬೇಕಾದ್ರೆ, ನಂಗೆ ಕಣ್ಣಾಲ್ಲ ಇರೋದು ಕಷ್ಟ. ನನ್ನ ಮಕ್ಕಳಲ್ಲಿ ಯಾರೂ ಇಂಗಾಡ್ತಿರ್ನಿಲ್ಲಪ್ಪ ಈ ವಯಸ್ನಾಗೆ ?"

"ಏನೋ ಆಟ ಆಡುವಾಗ ಬಿತ್ತೋ ಏನೋ, ಅದ್ಕೆ ನಾ ಯೇನ್ ಮಾಡ್ಲಿ ? ನಂಗೆಷ್ಟು ದಿನ ಆ ಶಿವ ನಂಗೆ ಹೊಡ್ಡಿಲ್ಲಾ. ನಾವೆಲ್ಲಾ ಅವ್ನಂಗೆ ಚಾಡಿ ಹೇಳಿದ್ವೇನೋ?"

"ಸಾಕು ನಡ್ಯೋ ಹೊತ್ತಾಯ್ತು. ಸ್ನಾನ ಪೂಜೆ ಮಾಡ್ಕಂಡು ಊಟ ಮಾಡು ಹೋಗು."

ಎನ್ನಲು ಮರು ಮಾತಾಡದೆ ಸರ್ಪಭೂಷಣ ಸ್ನಾನದ ಮನೆಯತ್ತ ಹೆಜ್ಜೆ ಇಟ್ಟ. ಸ್ನಾನ ಪೂಜೆಯಾದಮೇಲೆ ತಾಯಿ ರಾಗಿ ಹಿಟ್ಟು, ಅನ್ನ ಹಿತಕವರೆ ಬೇಳೆ ಸಾರು, ತುಪ್ಪ, ಮೊಸರು ಎಲ್ಲವನ್ನು ಅಣಿ ಮಾಡಿದರು. ಸೊಗಸಾದ ಊಟದ ರುಚಿಯನ್ನು ಸರ್ಪಭೂಷಣ ಸವಿದು ಹೊಲದ ಕಡೆ ಹೊರಟ.

    

ಕಾರ್ತೀಕ ಮಾಸದ ಸೋಮವಾರದ ದಿನ ಗುರು ಗುರುಸಿದ್ಧಸ್ವಾಮಿಗಳ ಪಾದ ಪೂಜೆಗೆ ಚೆನ್ನಮ್ಮನವರು ಅಣಿ ಮಾಡುತ್ತಿದ್ದಾರೆ. ಗುರುಗಳು ಚಿಕ್ಕ ಬಾಣಾವರಕ್ಕೆ ಬರಲು ಎತ್ತಿನ ಬಂಡಿಯನ್ನು ಕಳುಹಿಸಿದ್ದರು. ಗುರುಸಿದ್ಧ ಸ್ವಾಮಿಗಳು ಬೆಳಗಿನ ಹತ್ತು ಘಂಟೆಯ ಸಮಯಕ್ಕೆ ಬಂದರು. ಮಲ್ಲಿಕಾರ್ಜುನಪ್ಪನವರು ಗುರುಗಳಿಗೆ ನಮಸ್ಕರಿಸಿ ಸ್ವಾಗತಿಸಿದರು. ಮನೆಯ ಒಳಭಾಗದಲ್ಲಿ ಹಾಕಿದ್ದ ಹಗ್ಗದ ಮಂಚದಮೇಲೆ ಮಂಡಿಸಿದರು. ಕೂಡಲೇ ಮನೆಯವರೆಲ್ಲಾ ಬಂದು ಗುರುವಿಗೆ ನಮಸ್ಕಾರ ಮಾಡಿದರು. ಗುರುಗಳ ಮಠಕ್ಕೆ ಸರ್ಪಭೂಷಣ ಮೂರು ವರ್ಷದವನಾಗಿದ್ದಾಗ ಬಂದಿದ್ದ. ಆದರೆ ಈಗ ಶೈಶವಾವಸ್ಥೆ ಕಳೆದು ಬಾಲ್ಯಾವಸ್ಥೆ ಬಂದಿದೆ. ಎಂಟು ಹತ್ತು ವರ್ಷದ ಕುವರ ಸರ್ಪಭೂಷಣ ಗುರುಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ—

"ಬುದ್ಧಿ....ಚೆನ್ನಾಗಿದ್ದೀರಾ?" ಎಂದ

ಗುರುಗಳು ಹುಡುಗನ ಚಟುವಟಿಕೆಯನ್ನು ನೋಡಿ ಮಲ್ಲಿಕಾರ್ಜುನಪ್ಪನವರತ್ತ ತಿರುಗಿ—

"ನೋಡಿದ್ರಾ ಮಲ್ಲಿಕಾರ್ಜುನಪ್ಪನವರೇ, ನಿಮ್ಮ ಮಗ ಎಷ್ಟು ಚಾಲೂಕಾಗವ್ನೆ ?"

"ಈಗಿನ ಕಾಲದ ಹುಡುಗರು ಬರೇ ಮಾತ್ನೇ ಬುದ್ಧಿ ತೋರಿಸ್ತಾರ್‍ಯೇ ಹೊರ್ತು ಮತ್ಯಾವುದ್ರಲ್ಲೂ ಇಲ್ಲ. ಇವನೇನೂ ಓದಿ ಬೂದಿ ಮುಕ್ಕೋದು ಅಷ್ಟ್ರಲ್ಲೇ ತಗೊಳ್ಳಿ. ದಿನಾ ಜಗಳ, ಹೊಡೆದಾಟ, ವಡ್ಡಾಟ ಜನಗಳ ಹತ್ತಿರ ನಾವು ಬಾಯಿ ಕೊಡಲಿಕ್ಕಾಗೋಲ್ಲ. ಒಳ್ಗೊಳ್ಗೆ ಅವರವ್ವ....ಮರುಗುತ್ತಾ ಇದ್ದಾಳೆ ಬುದ್ಧಿ"

ಪಕ್ಕದಲ್ಲಿ ನಿಂತಿದ್ದ ಚನ್ನಮ್ಮನವರ ಕಣ್ಣಿನಲ್ಲಿ ನೀರು ಹರಿಯಲಾರಂಭಿಸಿತು. ಗುರುಗಳಿಗೆ ತಮ್ಮ ದುಃಖವನ್ನು ತೋಡಿಕೊಳ್ಳಲು ಆರಂಭಿಸಿದರು.

"ಹೆತ್ತವರಿಗೆ ಇವನಿಂದ ಅಪಕೀರ್ತಿ ಬರೋದೆ ಬಾಕಿ ಬುದ್ಧಿ"

"ಹಾಗೆಲ್ಲಾ ಅನ್ಬಾರ್ದವ್ಮ, ಮಕ್ಕಳು ನಾಲ್ಕು ದಿನ ಹಾಗಾಡ್ತವೆ ಅದಕ್ಕೆಲ್ಲಾ ಯಾಕೆ ಯೋಚನೆ ಮಾಡ್ತೀರಿ? ಅವನು ಮಹಾ ಪುರುಷನಾಗೋ ಲಕ್ಷಣಗಳು ನನಗೆ ಕಾಣ್ತಿವೆ ಅಮ್ಮಾ"

"ಏನೋ ಬುದ್ಧಿ ನನಗದೊಂದೂ ತೋಚ್ತಾ ಇಲ್ಲ. ಹೀಗೆ ಆದ್ರೆ ನೊಂದ

ನ್ಯಾಗ್ಬಿಟ್ರೆ ಅಂತ ನನಗೂ ಯೋಚನೆ...ಬುದ್ಧಿ" ಎಂದರು ಮಲ್ಲಿಕಾರ್ಜುನಪ್ಪ ನವರು.

"ಹಾಗಲ್ಲವಪ್ಪ ಅದು ನಿಮ್ಮಲ್ಲೇ ಇದೆ. ಮಕ್ಕಳಿಗೆ ಒಳ್ಳೆಯದನ್ನು ಹೇಳು ವುದು ತಂದೆ–ತಾಯಿಗಳ ಕರ್ತವ್ಯ ಅಲ್ಲವೇ ?"

ಕೂಡಲೇ ಚೆನ್ನಮ್ಮನವರು—

"ಗದರ್‍ಸಿ ಆಯ್ತು ಹೊಡೆದಾಯ್ತು, ಬಡ್ದಾಯ್ತು, ಎಲ್ಲಾ ಶಿಕ್ಷೇನೂ ಕೊಟ್ಟಾಯ್ತು, ಯಾವುದಕ್ಕೂ ಜಗ್ಗಲಿಲ್ಲ. ಸುಮ್ಮನೆ ದಂಡವಾಗಿ ತಿರುಗ್ತಾ ಅವ್ನೆ....ಓದೋ ಮಮತೇನೇ ಇಲ್ಲ. ಇಂಥವನ್ನ ಕಟ್ಕೊಂಡು ಸಾಯೋದು ನಮ್ಮ ಹಣೇ ಬರಹ ಬುದ್ಧಿ"

"ಅವನನ್ನು ಶಾಲೆಗೆ ಸೇರಿಸಿಯಮ್ಮಾ ಸರಿಹೋಗ್ತಾನೆ"

"ಏನು ಶಾಲೇನೋ ಏನೋ ? ದೇವರಿಗೇ ಗೊತ್ತು. ಶಾಲೆಗೆ ಹೋದ್ರೆ ತಾನೇ ಹೇಳಿ ಬುದ್ಧಿ"

ಎಂದು ಮುಂದಿನ ಪೂಜಾ ಸಿದ್ಧತೆ ಮಾಡಲು ಚೆನ್ನಮ್ಮನವರು ಪೂಜಾ ಕೋಣೆಯತ್ತ ಹೊರಟರು.

ಗುರುಗಳು ಮನೆಯ ಸುತ್ತಲೂ ಅವಲೋಕಿಸಿದರು. ಸಾಮಾನ್ಯ ಮನೆ. ಅಂಗಡಿಯಲ್ಲಿ ನೋಡಿದರೂ ಏನೂ ಸಾಮಾನುಗಳಿಲ್ಲ. ಮಲ್ಲಿಕಾರ್ಜುನಪ್ಪನವರು ವ್ಯಾಪಾರ ಮಾಡಿ ಜೀವನ ಮಾಡಬೇಕು. ಹೊಲದಲ್ಲಿ ಬೆಳೆ ಬರುವುದೇ ಕಷ್ಟ. ಎಲ್ಲಾ ಬಂಜರು ಭೂಮಿಯೇ. ಹೀಗಾಗಿ ವ್ಯಾಪಾರವನ್ನೇ ನಂಬಿಕೊಂಡು ಜೀವಿಸಬೇಕು. ನಲವತ್ತೈದು ಐವತ್ತು ಮನೆಗಳಿಗೆಷ್ಟೋ ಚಿಲ್ಲರೆ ಅಂಗಡಿಗಳು. ವ್ಯಾಪಾರದಲ್ಲಿ ತಾನೇ ಏನು ? ಮನೆಯನ್ನೆಲ್ಲಾ ಸಾರಿಸಿ ಗುಡಿಸಿ ರಂಗೋಲೆ ಇಟ್ಟಿದ್ದಾರೆ. ಅಡಿಗೆ ಕೋಣೆಯತ್ತ ದೃಷ್ಟಿ ಹರಿಸಲು ಅಲ್ಲಿ ನಾಲ್ಕಾರು ಮಡಿಕೆ ಗಳು ನಾಲ್ಕಾರು ಹಿತ್ತಾಳೆ ಪಾತ್ರೆಗಳು. ಮನೆತುಂಬಾ ಮಕ್ಕಳು, ದೊಡ್ಡ ಸಂಸಾರ. ಎಲ್ಲವನ್ನೂ ಅರ್ಥಮಾಡಿಕೊಂಡ ಗುರುಗಳು ಮಲ್ಲಿಕಾರ್ಜುನಪ್ಪನವ ರನ್ನು ಕರೆದರು.

"ಬನ್ನಿ ಮಲ್ಲಿಕಾರ್ಜುನಪ್ಪನವರೇ "

"ಏನು ಬುದ್ಧಿ ಕರೆದಿರಾ ?" ಎಂದು ಹತ್ತಿರ ಬಂದು ಕೈಕಟ್ಟಿ ನಿಂತರು.

"ಏನು ನಿಮ್ಮದು ವ್ಯವಸಾಯ ಏನೂ ಇಲ್ವಾ ?"

"ಇಲ್ಲ ಬುದ್ಧಿ ಎಲ್ಲಾ ಬಂಜರು ಭೂಮಿ ಎಲ್ಲಿ ಬೆಳೆತಾವೇ ? ಒಂದು ಸಾರಿ ಮಾಡಿದ ಖರ್ಚು ಹುಟ್ಟಲಿಲ್ಲ."

"ಹಾಗಾದ್ರೆ ಜೀವನ ?"

"ಹೀಗೆ ವ್ಯಾಪಾರದಲ್ಲೇ ಅಷ್ಟ ಇಷ್ಟು ಬರುತ್ತೆ ಹೇಗೋ ಜೀವನ ಸಾಗಿಸ್ತಾ ಇದ್ದೀನಿ"

"ಮಲ್ಲಿಕಾರ್ಜುನಪ್ಪನವರೇ ಇಲ್ಲೇನೂ ಲಾಭ ಇಲ್ಲದೇ ಹೋದ್ರೆ ಬೆಂಗಳೂರಿನಲ್ಲೇ ಒಂದು ಮನೆ ಮಾಡ್ಕೊಂಡು ಒಂದು ವ್ಯಾಪಾರ ಮಾಡಬಹುದಲ್ಲ."

"ಇಲ್ಲೇ ಇಷ್ಟರಮಟ್ಟಿಗೆ, ಏನಿಲ್ಲಾ, ಎತ್ತಿಲ್ಲ, ಬೆಂಗಳೂರಿಗೆ ಬಂದು ಹೇಗೆ ತಾನೇ ಜೀವನ ಮಾಡೋದು ? ಬಂಡವಾಳವಿಲ್ಲದ ಬಡಾಯಿಯಾಗುತ್ತೆ. ನಾನು ಬೆಂಗಳೂರಿಗೆ ಬರ್ತೀನಿ ಅಂದ್ರೆ ಈ ದೊಡ್ಡ ಸಂಸಾರ ಕಟ್ಕೊಂಡು..." ಎಂದು ಮಾತನ್ನು ಮುಗಿಸುವ ಮುನ್ನ ಗುರುಸಿದ್ಧಸ್ವಾಮಿಗಳುಲಿದರು.

"ನೀವು ಅದಕ್ಕೇನೂ ಯೋಚನೆ ಮಾಡಬೇಡಿ. ನಾನು ನಿಮಗೆ ಒಂದೆರಡು ಸಾವಿರ ರೂಪಾಯಿಗಳನ್ನು ಕೊಡ್ತೇನೆ. ಅದ್ರಿಂದ ಒಂದು ಸ್ವಲ್ಪ ಅಡಿಕೆ ತಗೊಂಡು ವ್ಯಾಪಾರ ಮಾಡಿ. ಆದರಿಂದ ದೇವರು ನಿಮಗೆ ಕಣ್ಣು ಬಿಟ್ರೆ ಸುಖವಾಗಿ ಹೇಗೋ ಸಂಸಾರವನ್ನು ನಿಭಾಯಿಸಿಕೊಂಡು ಹೋಗಬಹುದು. ನೀವು ಇಷ್ಟು ಕೆಟ್ಟ ಸ್ಥಿತಿಯಲ್ಲಿದ್ದೀರಿ ಅನ್ನೋದೇ ನನಗೆ ಗೊತ್ತಿರಲಿಲ್ಲ."

"ಏನು ಮಾಡೋದು ಬುದ್ಧಿ. ಯಾವುದು ಮಾಡಿದ್ರೂ ಕೈ ಹತ್ತದೆ ಹಿಂದಿನವರ ಆಸ್ತಿನೆಲ್ಲಾ ಮಾರಿ ಜೀವನ ಸಾಗಿಸೋದಕ್ಕೇ ಖರ್ಚಾಯ್ತು. ಆ ಅನಿಷ್ಟಗಳೆಲ್ಲಾ ಕಳೀಲಿ ಅಂತ್ಲೇ ತಮ್ಮನ್ನ ಕರೆದು ಗುರುಸೇವೆ ಮಾಡಿದ್ರಾದ್ರೂ ಒಳ್ಳೇದಾಗುತ್ತೆ ಅಂತ ಮಾಡ್ದೆ. ಆದ್ರೆ ಅದು ನಿಜ ಆಗ್ತಾ ಇದೆ ಅಂತ ನಿಮ್ಮ ಬಾಯಿಂದ್ಲೇ ಬಂತು"

"ಅದು ದೇವರ ನಿಯಮ. ನಮ್ಮದೇನು ಬಂತು ?"

ಹೀಗೆ ಇಬ್ಬರೂ ಮಾತನಾಡುತ್ತಿರುವಲ್ಲಿಗೆ ಚೆನ್ನಮ್ಮನವರು ಬಂದು "ಬುದ್ಧಿ ಎಲ್ಲಾ ಅಣಿಯಾಯ್ತು ದಯಮಾಡಿಸಿರಿ. ಸ್ನಾನ ಮಾಡಿ ಪೂಜೆ ಮಾಡಿಕೊಳ್ಳುವಿರಂತೆ."

ಎನ್ನಲು "ಆಗಲಮ್ಮ" ಎಂದು ಎದ್ದು ತಮ್ಮ ಕಫನಿಯನ್ನು ತೆಗೆದು ಹಗ್ಗದ ಮಂಚದ ಮೇಲಿಟ್ಟು ಸ್ನಾನದ ಮನೆಗೆ ನಡೆದರು. ಸ್ನಾನ ಮುಗಿದಂತೆ

ಪೂಜೆಯಾಯಿತು. ಪ್ರಸಾದವನ್ನು ಸ್ವೀಕರಿಸಿದರು. ಬಡವರಾದರೂ ಅವರು ಹೋಳಿಗೆ, ಬದನೇಕಾಯಿಬಜ್ಜಿ, ಬೇಳೀ ಸಾರು ಮಾಡಿ ಹುರುಳಿ ಹಪ್ಪಳ ಸುಟ್ಟು ತುಪ್ಪ, ಮೊಸರು ಎಲ್ಲವನ್ನೂ ಅಣಿಮಾಡಿ ತಂದರು. ಗುರುಗಳ ಜೊತೆಯಲ್ಲಿ ಮನೆಯವರೆಲ್ಲಾ ಭೋಜನವನ್ನು ಸ್ವೀಕರಿಸಿದರು. ಗುರುಗಳು ತಾಂಬೂಲವನ್ನು ಸ್ವೀಕರಿಸಿದ ಮೇಲೆ—

"ಮಲ್ಲಿಕಾರ್ಜುನಪ್ಪನವರೇ......ನನ್ನನ್ನೂ ಈ ಹೊತ್ತು ಕಳುಹಿಸಿ ಕೊಡಿ. ಬೆಂಗಳೂರಿಗೆ"

ಈ ಹೊತ್ತೇನು ನಾಳೆ ಹೋದ್ರಾಯ್ತು ಬುದ್ಧಿ" ಎಂದರು ಮಲ್ಲಿಕಾರ್ಜುನಪ್ಪನವರು. ಇತ್ತ ಬರುತ್ತಿದ್ದ ಚನ್ನಮ್ಮನವರು ಕೂಡಲೇ "ಊಂ ಬುದ್ಧಿ" ಎಂದರು.

"ಏಕೆ ಈಗ ಏನು ಹೊತ್ತಾಗಿದೆ? ಸಾಯಂಕಾಲದ ಹೊತ್ತಿಗೆ ಬೆಂಗಳೂರನ್ನು ಸೇರಬಹುದಲ್ಲಾ?"

"ನಾವು ಬಡವರಾದ್ರು ಗುರುಗಳನ್ನು ತೃಪ್ತಿಪಡಿಸದಷ್ಟು ಬಡವರಾಗಿಲ್ಲ ಬುದ್ಧಿ" ಎಂದರು ಚನ್ನಮ್ಮ.

"ಹಾಗೇನೂ ಇಲ್ಲಮ್ಮ ನನಗೂ ಬಡವರ ಮನೆಯ ಅಂಬಲಿಯನ್ನು ಸೇವಿಸುವುದರಲ್ಲೇ ಸಂತೋಷವಿದೆ ಅನ್ನೋದನ್ನ ನೀವು ಮರೆಯಬೇಡಿ"

"ಅದು ನಮ್ಮ ಪೂರ್ವ ಪುಣ್ಯ ಬುದ್ಧಿ"

"ಆಗಲಮ್ಮ ನಿಮ್ಮ ಮನಸ್ಸಿಗೆ ಬೇಸರ ಮಾಡುವುದಿಲ್ಲ. ನಾಳೆ ಬೆಳಗ್ಗೇನೇ ಹೊರಡುತ್ತೇನೆ"

ಎನ್ನಲು ದಂಪತಿಗಳಿಬ್ಬರಿಗೂ ಸಂತೋಷವಾಯಿತು.

ಮರುದಿನ ಗುರುಗಳು ಸ್ನಾನ, ಪೂಜೆ, ಊಟ ಮುಗಿಸುತ್ತಿದ್ದಂತೆಯೇ ಫಲ-ತಾಂಬೂಲ ಕಾಣಿಕೆಯನ್ನು ಹಿತ್ತಾಳೆಯ ತಟ್ಟೆಯೊಂದರಲ್ಲಿ ಇಟ್ಟು ಕೊಟ್ಟರು. ಅದನ್ನು ಸ್ವೀಕರಿಸಿ ಗುರುಗಳು ಎತ್ತಿನ ಬಂಡಿಯನ್ನು ಏರಿದರು. ಮನೆಯವರೆಲ್ಲಾ ಗುರುಗಳನ್ನು ಬಾಗಿಲವರೆಗೆ ಬಂದು ಬೀಳ್ಕೊಟ್ಟರು. ಗುರುಗಳು ಅಂದೇ ಬೆಂಗಳೂರನ್ನು ತಲುಪಿದರು.

‡ ‡ ‡ ‡ ‡

3)

ಚನ್ನಮ್ಮ–ಮಲ್ಲಿಕಾರ್ಜುನಪ್ಪ ಇಬ್ಬರೂ ಸಹ ಕೆಲವು ದಿನಗಳನ್ನು ಚಿಕ್ಕ ಬಾಣಾವರದಲ್ಲಿಯೇ ನೂಕಿದರು. ಆದರೆ ಅವರ ಪರಿಸ್ಥಿತಿ ತುಂಬಾ ಬಿಗಡಾಯಿಸ ತೊಡಗಿತು. ಚನ್ನಮ್ಮನವರು ಒಂದು ದಿನ ಗಂಡನು ಚಿಂತಿಸುತ್ತಾ ಅಂಗಡಿ ಯಲ್ಲಿ ಕುಳಿತಿರಲು ಹಾಲನ್ನು ತೆಗೆದುಕೊಂಡು ಹೋಗಿ ಕೊಡಲು ನಿಲ್ಲಲು ಪತಿಯ ಸ್ಥಿತಿಯನ್ನು ಗಮನಿಸುತ್ತಾ,

"ಹಾಲು ತೆಗೆದುಕೊಳ್ಳಿ..."

"ನನಗೆ ಬೇಡ ಮಕ್ಕಳಿಗೇ ಕೊಟ್ಟುಬಿಡು"

"ಕೆಲಸ ಮಾಡುವವರು ನೀವು. ಏನೂ ತೆಗೆದುಕೊಳ್ದೇ ಹೀಗೆ ಅಲಕ್ಷ್ಯ ಮಾಡ್ಬಿಟ್ರೆ ಹ್ಯಾಗೆ ದೇಹದ ಸ್ಥಿತೀನೂ ಸ್ವಲ್ಪ ನೋಡಿಕೊಳ್ಳಿ"

"ಏನು ಸ್ಥಿತೀನೋ...."

"ಈಗ ನಾನು ಮನಸ್ಸು ಮಾಡ್ಬಿಟ್ಟಿದ್ದೀನಿ..."

"ಏನು ?"

"ಗುರುಗಳು ಮತ್ತೆ ನಮ್ಮ ಪಕ್ಕದ ಮನೆಯವರ ಕೈಯಲ್ಲಿ ಹೇಳಿ ಕಳ್ಳಿಸಿದ್ದಾರೆ. ಹೊರಟ್ಹೋಗೋಣ ಅಂತ"

"ಪಟ್ಟಣದಲ್ಲಿ ಜೀವನ ಇನ್ನೂ ಕಷ್ಟವಲ್ವೇನೇ ?"

"ಕೆಟ್ಟು ಪಟ್ಟಣ ಸೇರು ಅಂತ ಹೇಳೋಲ್ವೇ ? ಹಾಗೆ....ಹೋಗೋಣ ಗುರುಗಳ ಆಶೀರ್ವಾದವಿದೆ. ವ್ಯಾಪಾರ ಚೆನ್ನಾಗಾದ್ರೆ ಹೇಗಾದ್ರೂ ಜೀವನ ಸಾಗಿಸಬಹುದು."

"ಹೌದು... ನಿನ್ನ ಇಷ್ಟ.... ನನ್ನದೇನೂ ಇಲ್ಲ. ನಾನು ಹೋಗಿ ಒಂದು ಸಣ್ಣ ಮನೆ ಮಾಡಿ ಬರ್ತೀನಿ. ಆಮೇಲೆ ಹೊರಟ್ಹೋಗೋಣ" ಎಂದು ನುಡಿದರು.

ಒಂದು ದಿನ ಎಲ್ಲಾ ಸಾಮಾನುಗಳನ್ನೆಲ್ಲಾ ಗಂಟು ಮೂಟೆ ಕಟ್ಟಿ ಕೊಂಡು ಬೆಂಗಳೂರಿನ ಮಾಮೂಲ್ ಪೇಟೆಯಲ್ಲಿ ಒಂದು ಮನೆ, ಒಂದು ಅಂಗಡಿ ಮಾಡಿಕೊಂಡರು. ಗುರುಗಳು ಬಂದು "ಎಲ್ಲಾ ಸರಿಯಾಗಿದೆಯಾ ?" ಎಂದು ವಿಚಾರಿಸಿಕೊಂಡು ಎರಡು ಸಾವಿರ ರೂಪಾಯಿಗಳನ್ನು ಕೊಟ್ಟು ನಡೆದರು. ಅಂದೇ ಅದರಿಂದ ಅಡಿಕೆ ತಂದು ಅಡಿಕೆ ವ್ಯಾಪಾರ ಮಾಡಲಾರಂಭಿಸಿದರು. ಸಾಯಂಕಾಲದ ಹೊತ್ತು ಚನ್ನಮ್ಮನವರು, ಮನೆಯವರು ಶಿಪ್ಪಶೆಟ್ಟರ ಮಠಕ್ಕೆ ಪ್ರವಚನಕ್ಕೆ ಹೋಗುವುದು ಗುರುಸೇವೆ ಮಾಡುವುದು ಹೀಗೇ ಕಾಲ

ನೂಕತೊಡಗಿದರು. ಕೆಲವು ದಿನಗಳಲ್ಲೇ ವ್ಯಾಪಾರವು ಸ್ವಲ್ಪ ಕುದುರಿತು. ಜೀವನ ಸುಗಮವಾಗಿ ಸಾಗಲಾರಂಭಿಸಿತು.

‡ ‡ ‡ ‡ ‡

"ಚನ್ನಮ್ಮನವರು ಪತಿಯು ಬರುತ್ತಿದ್ದಂತೆಯೇ—

"ಏನೂ ಅಂದ್ರೆ ?"

"ಏನೇ ?"

"ಅಲ್ಲಾ ನಮ್ಮ ಸಪ್ಪಣ್ಣನನ್ನು ಓದಿಸಲಿಕ್ಕೆ ಬಿಟ್ಟಿದ್ದೇನೋ ಸರಿ ಆದ್ರೆ ಈಗ ಅವನನ್ನು ಸ್ವಾಮಿಗಳು ಮಾಡುವುದು ಅಂದ್ರೇನು ?

"ಯಾರ ಯಾರ ಹಣೆಯಲ್ಲಿ ಏನೇನು ಬರೆದಿದ್ಯೋ ಅದನ್ನ ತಪ್ಪಿಸಿಕೊಳ್ಳ ಲಿಕ್ಕೆ ಆಗುತ್ತೇನೇ ? ಅವನು ಸನ್ಯಾಸಿಯಾಗಬೇಕು ಅಂತ್ಲೇ ಇರೋದ್ರಿಂದ್ಲೇ ಈತ ಶಿಪ್ಪಶೆಟ್ಟರ ಮಠದಲ್ಲಿನ ಸ್ವಾಮಿಗಳನ್ನು ಸೇರಿದ. ಈಗ ಸ್ವಾಮಿಗಳು ಅವ ನಿಗೇ ಮಠದ ಪಟ್ಟಾಧಿಕಾರ ವಹಿಸಬೇಕು ಅಂಥ ಹೇಳಿದ್ರು. ಅತನೂ ಒಪ್ಪಿ ಕೊಂಡಿದ್ದಾನೆ. ಅಂದಮೇಲೆ ನಮ್ಮ ಭಾಗದ ಕೆಲಸ ತಾನೇ ಏನು ಹೇಳು "

"ನೀವು ಕಲ್ಲು ಹೃದಯುದವರು. ಹೇಗಾದ್ರೂ ಇರ್ತೀರಿ ಆದ್ರೆ ಈ ಹೆತ್ತ ಕರುಳಿಗೆ ಸಂಕಟವಾಗುತ್ತೆ. ಅದು ನಿಮಗೆ ಹ್ಯಾಗೆ ಗೊತ್ತಾಗಬೇಕು ಹೇಳಿ"

"ಚನ್ನ....ನಿನಗಾದ್ರೂ ಇನ್ನೂ ಗಂಡು ಮಕ್ಕಳು, ಹೆಣ್ಣು ಮಕ್ಕಳೂ ಎಲ್ಲಾ ಇದ್ದಾರೆ. ಇವನೊಬ್ಬನನ್ನು ಬಿಟ್ಟು ಜೀಲೆಯವರಿಗೆ ಮದುವೆ ಮಾಡಿ ಮೊಮ್ಮಕ್ಕಳನ್ನು ಪಡೆದು ಸಂತೋಷಪಡಬಹುದು. ಅದೊಂದು ದುಃಖ ವನ್ನು ಮರೆಯಬಹುದು. ಆದ್ರೆ ಅದೆಷ್ಟು ಜನ ಒಂದೊಂದೇ ಮಗುವನ್ನು ಪಡೆದು ಅವರನ್ನು ಸ್ವಾಮಿಗಳನ್ನಾಗಿ ಮಾಡಿ ದುಃಖ ನುಂಗಿಲ್ಲ. ನೀನೇ ಹೇಳು ರಾಜನ ಮಗನಾದ್ರೂ ಧ್ರುವ ತಪಸ್ಸಿಗೆ ಹೋಗಲಿಲ್ಲವೇ ? ಮಾರ್ಕಂ ಡೇಯ ಅಮರನಾಗಲಿಲ್ಲವೇ ? ಹಾಗೆಯೇ ನಮ್ಮ ಸಪ್ಪಣ್ಣನೂ ಆ ಅಂಶದಲ್ಲಿ ಹುಟ್ಟಿರೋದ್ರಿಂದ ಆತನು ಒಬ್ಬ ಮಹಾ ವ್ಯಕ್ತಿಯಾಗುತ್ತಾನೆ ಅಂತ ಕಾಣುತ್ತೆ ಹಾಗೆ ಆದ್ರೂ ಹೆತ್ತ ನಿನಗೆ ಕೀರ್ತಿ ದೊರೆತಂತಲ್ಲವೇ ?"

"ಇಲ್ಲ ಅಂದ್ರೆ ನಾನೇ ಆತ ಬಂದಮೇಲೆ ಒಂದು ಮಾತು ಕೇಳ್ತೀನಿ ತಾಯಿ ಮಾತಿಗೆ ಏನಾದ್ರೂ ಒಪ್ತಾನ್ಯೋ ಬಿಡ್ತಾನೋ ನೋಡೋಣ ಆಮೇಲೆ ಅವನ ಹಣೆಯಲ್ಲಿ ಬರೆದ ಹಾಗೆ ಆಗ್ಲಿ"

ತಂದೆ ತಾಯಿ ಇಬ್ಬರೂ ಮಾತನಾಡುತ್ತಿರುವಲ್ಲಿಗೆ ಸಪ್ಪಣ್ಣ ಬಂದ. ತಾಯಿ ಮಗನನ್ನು ನೋಡಿ—

"ಸಪ್ಪಣ್ಣ ಯಾವಾಗ ಬಂದೆ ?"

"ಇದೀಗ ತಾನೆ ಬಂದೆ ಯಾಕೆ ಒಂದು ಥರ ಸಪ್ಪಗಿದ್ದೀಯಲ್ಲಮ್ಮ"

"ನಿನ್ನದೇ ಯೋಚನೆ ಕಣೋ ಸಪ್ಪಣ್ಣ"

"ನನಗೇ ಚಿಂತೆಯಿಲ್ಲ ನನ್ನಮೇಲೆ. ನಿನಗೇನು ಅಷ್ಟೊಂದು ಚಿಂತೆ ? ನನ್ನ ಮೇಲೆ ? ನಾನು ಸುಖವಾಗಿ ಮಠದಲ್ಲಿ ಘಟ ಒಪ್ಪಿಸಿದ್ದೇನೆ."

"ಅಂದ್ರೆ ಅದು ಇನ್ನೆಷ್ಟು ದಿನ ಸರ್ಪಭೂಷಣ"

"ಎಷ್ಟು ದಿನ ಅಂದ್ರೆ ನಾನಿರುವವರೆಗೂ"

"ಈಗ ನಿನ್ನ ಮದ್ವೆ ವಿಚಾರ ತಾನೇ ಮಾತಾಡ್ತಾ ಇದ್ದೋ....ನೀನು ಹೇಳೋದನ್ನ ನೋಡಿದ್ರೆ...ನನಗೆ ದುಃಖವಾಗುತ್ತೆ ಸಪ್ಪಣ್ಣಾ"

"ಅಮ್ಮಾ ನನಗೀಗ ಯಾವ ವಯಸ್ಸಾಗಿದೆ ? ಇಪ್ಪತ್ತು ವರ್ಷ ತುಂಬಿದೆ ಈಗ್ಲೆ ಮದ್ವೆ ಅಂತ ಮಾತಾಡ್ತೀರಲ್ಲಾ ?"

"ಏಕಪ್ಪಾ ವಯಸ್ಸು ಸಾಲದೇ ? ನಾವು ಚೆನ್ನಾಗಿರುವಾಗ್ಲೇ ನಿನಗೊಂದು ಲಗ್ನ ಮಾಡಿ ಸಂತೋಷವಾಗಿ ಕಣ್ತುಂಬ ನೋಡಿ ಆನಂದಪಡಬೇಕು ಕಣೋ ಸಪ್ಪಣ್ಣ ನಿನಗೆ ನಮ್ಮ ಸ್ವಂತದವರು ಅನೇಕರು ಹೆಣ್ಣು ಕೊಡಬೇಕು ಅಂತಿದ್ದಾರೆ. ಯಾಕೆ ಆಗಬಾರದು ?"

"ಅಮ್ಮಾ ಈಗಾಗ್ಲೇ ಮಾಡಿದ್ದೀರಿ ಅಣ್ಣ-ಅಕ್ಕನಿಗೆ ಇನ್ನೂ ನನಗ್ಯಾತರದು ? ನಾನು ಮದ್ವೆ ಆಗೊಲ್ಲ"

"ಯಾಕೆ ?"

"ಆಗೋಕಿಷ್ಟವಿಲ್ಲ"

"ಯಾಕೆ ? ಹಾಗಾದ್ರೆ ಸ್ವಾಮಿಗಳಾಗ್ತಿಯೇನು ?"

"ಹೌದು ಗುರುಗಳು ಹೇಳಿದ್ದಾರೆ. ನನ್ನ ಮನಸ್ಸು ಹಾಗೇ ಅನ್ನಿಸುತ್ತೆ. ಅದಕ್ಕೇ ನನ್ನ ಚಿಂತೆ ಬಿಟ್ಬುಬಿಡೋದು ಉತ್ತಮ"

ಮಲ್ಲಿಕಾರ್ಜುನಪ್ಪನವರು ಹೆಂಡತಿ ಮತ್ತು ಮಗ ಸಪ್ಪಣ್ಣನ ಮಾತುಗಳನ್ನು ಕೇಳುತ್ತಲೇ ಇದ್ದರು. ಹೆಂಡತಿ ಗಂಡನತ್ತ ತಿರುಗಿ—

"ನೋಡಿದ್ರಾ...ನಾನು ಹೇಳಿದ ಮಾತಿಗೆ ಸಿಕ್ಕಿದ ಮರ್ಯಾದೆ"

"ನೀನು ಹೇಳಿದ್ರೇ ಸಿಕ್ಕಲಿಲ್ಲ. ಅಂದ್ರೆ ಇನ್ನೂ ನಾನು ಹೇಳಿದ್ರೆ ಕೇಳ್ತಾನ್ಯೇ ? ನಾನು ಆಗ಼್ೇ ಹೇಳಲಿಲ್ವೇನೇ ? ಮಕ್ಕಳ ಮನಸ್ಸು ಹೇಗೇಗಿ ರುತ್ತೋ ಹಾಗೇ ನಡೀಲಿ ಬಿಡು"

"ಇದನ್ನ ಅನ್ನೋದ್ಕೇ ನೀವು ಇಲ್ಲಿ ನಿಂತ್ರೇನು ?"

"ಹೌದಮ್ಮ ಅಪ್ಪಾಜಿ ಹೇಳೋದು ನಿಜ."

"ಸಪ್ಪಣ್ಣ ಮಾತಾಡಿ ಮಾತಾಡಿ ನನ್ನನ್ನು ಕೊಲ್ಲಬೇಡ್ವೋ, ಹೆತ್ತವಳ ಸಂಕಟ ನಿಮಗೆಲ್ಲಿ ಅರ್ಥವಾಗಬೇಕು ?"

ಎಂದು ಚೆನ್ನಮ್ಮನವರು ಕಣ್ಣೀರನ್ನು ಒಂದೇ ಸಮನೆ ಒರೆಸಿಕೊಳ್ಳಲು ಸಪ್ಪಣ್ಣ ಸಮಾಧಾನಿಸುವ ಧನಿಯಲ್ಲಿ—

"ಅಮ್ಮ ಸುಮ್ಮನೆ ಯಾಕೆ ಇದಕ್ಕೆಲ್ಲಾ ದುಃಖಪಡಬೇಕು ? ಸಾವಿರ ಕ್ಕೊಬ್ರಾದ್ರೂ ಯಾಕೆ ಸನ್ಯಾಸಿ ಆಗಬಾರದು ?"

"ಸಂನ್ಯಾಸಿಯಾಗಿ ಸಾಧಿಸೋದನ್ನ ಸಂಸಾರಿಯಾಗಿ ಸಾಧಿಸಲಿಕ್ಕೆ ಆಗೋ ಲ್ವೇನು ?"

"ಸಂಸಾರಿಯಾಗಿ ಜಂಜಾಟದಲ್ಲಿ ಸಾಗಿಸೋದ್ರ ಬದಲು ಸನ್ಯಾಸಿ ಆಗಿ ಸುಖವಾಗಿ ಇರಬಹುದಲ್ಲವೇ ?"

"ಓದಿದವರಿಗೆ ಹೆಚ್ಚಿಗೆ ಹೇಳಬೇಕಾಗಿಲ್ಲ. ನಿನ್ನಿಷ್ಟ ಬಂದ ಹಾಗೆ ಮಾಡಪ್ಪಾ " ಎಂದು ತಾಯಿ ಅಡಿಗೆ ಕೋಣೆಯತ್ತ ಹೊರಟರು. ತಂದೆಯವರು ತಮ್ಮ ಕೋಣೆಗೆ ಹೊರಟರು.

ಸರ್ಪಭೂಷಣ ಪ್ರಪಂಚದ ಲೀಲೆಯನ್ನು ಲೆಕ್ಕ ಹಾಕುತ್ತಾ ಚಾಪೆಯ ಮೇಲೆ ಹಾಗೆಯೇ ಉರುಳಿದ. ಅಷ್ಟರಲ್ಲಿ ಅಣ್ಣಂದಿರು ಎಲ್ಲರೂ ಬಂದು ಸೇರಿದರು ನನ್ನ ಸ್ಥಾನ ತುಂಬಿಸಲು ಅಕ್ಕ–ಅಣ್ಣಂದಿರಿದ್ದಾರೆ. ನಾನು ಸಂನ್ಯಾಸಿಯಾಗು ವುದೇ ಒಳ್ಳೆಯದು ಸರಿ. ಎಂಬ ನಿರ್ಧಾರಕ್ಕೆ ಬಂದರು.

‡ ‡ ‡ ‡ ‡

ಗುರುಸಿದ್ಧ ಸ್ವಾಮಿಗಳು ಪ್ರವಚನ ಮುಗಿದ ಮೇಲೆ ಮಠದ ಹಜಾರ ದಲ್ಲಿ ಹೋಗಿ ಕುಳಿತರು. ಅಲ್ಲಿಗೆ ಸರ್ಪಭೂಷಣರು ಬಂದು ಮೆಲ್ಲನಿಯಲ್ಲಿ "ಬುದ್ಧಿ" ಎಂದರು.

"ಏನು ಸರ್ಪಭೂಷಣರೇ...?"

"ಪರಮಾರ್ಥ ಸಾಧನೆಯಲ್ಲಿ ಇಪ್ಪತ್ತೆರಡು ವರ್ಷಗಳನ್ನ ಕಳೆದಾಯ್ತು" ಆಶ್ರಮವನ್ನು ಸ್ವೀಕರಿಸಿಯಾಯ್ತು"

"ಹೌದು...ಅದಕ್ಕೆ"

"ಏಕೋ ನಾನು ಕೆಲವು ಪುಣ್ಯಕ್ಷೇತ್ರಗಳನ್ನು ಸುತ್ತಾಡಬೇಕೆಂಬ ಆಸೆ ಆಗ್ತಾ ಇದೆ ನನಗೆ ಬುದ್ಧಿ..."

"ಅದಕ್ಕೇನಂತೆ ಹೋಗಿ ಬಾರಪ್ಪ.:ಪುಣ್ಯ ಕಾರ್ಯಕ್ಕೆ ಬೇಡ ಅಂತ ನಾನು ಯಾಕೆ ಹೇಳಲಿ ?"

"ಬಹಳ ಸಂತೋಷ ಬುದ್ಧಿ"

ಎಂದು ತಮ್ಮ ಕೋಣೆಯತ್ತ ನಡೆದರು. ಗುರುಗಳು ಶಿಷ್ಯನ ಲವಲವಿಕೆಯನ್ನು ನೋಡಿ ಮನದಲ್ಲೇ ಹಿರಿ ಹಿಗ್ಗಿದರು.

ದೇಶ ಸಂಚಾರದ ದಿನವೂ ಬಂತು. ಸರ್ಪಭೂಷಣರು ಗುರುಗಳ ಹತ್ತಿರ ಬಂದು,

"ಬುದ್ಧಿ ...ನಾನೀಗ ಹೊರಡಲಿದ್ದೇನೆ ತೀರ್ಥಯಾತ್ರೆಗೆ. ಮೊದಲು ತಮ್ಮ ಆಶೀರ್ವಾದ ಅವಶ್ಯ....ಅದಕ್ಕಾಗಿ ಬಂದಿದ್ದೇನೆ."

ಎಂದು ಸಾಷ್ಟಾಂಗವೆರಗಿದರು.

ಗುರುಗಳು ಕಾಷಾಯ ವಸ್ತ್ರವೊಂದನ್ನು ಕೈಗಿತ್ತು ಕೊರಳಿಗೆ ರುದ್ರಾಕ್ಷಿಯ ಸರವೊಂದನ್ನು ಹಾಕಿ ಒಂದು ಚೀಲದಲ್ಲಿ ಹಣವನ್ನು ಕಟ್ಟಿ ನೀಡಿದರು.

"ಗುರುಗಳೇ ಇಷ್ಟೆಲ್ಲಾ ಹಣ ಏಕೆ ?"

"ದೂರ ಪ್ರಯಾಣಕ್ಕೆ ಬೇಕಾಗುತ್ತದೆ ಇರಲಿ"

ಎನ್ನಲು ಮತ್ತೆ ನಮಸ್ಕರಿಸಿ ತಮ್ಮ ತಂದೆ-ತಾಯಿಗಳಿಗೆ ತಿಳಿಸಿ ಹೋಗಬೇಕೆಂಬ ಮನಸ್ಸಿನಿಂದ ಮನೆಯಕಡೆಗೆ ಬಂದರು. ತಾಯಿ ಚೆನ್ನಮ್ಮನವರು ಸರ್ಪಭೂಷಣನನ್ನು ನೋಡಿ ಓಡಿ ಬಂದು—

"ಬನ್ನಿ....ಬನ್ನಿ ಬುದ್ಧಿ..."

ಎನ್ನಲು ನಗುತ್ತಾ ಹಜಾರದಲ್ಲಿದ್ದ ಕುರ್ಚಿಯ ಮೇಲೆ ಬಂದು ಕುಳಿತರು. ಕೂಡಲೆ ತಂದೆ ಮಲ್ಲಿಕಾರ್ಜುನಪ್ಪನವರು, ಶಾಂತಪ್ಪ, ಮಲ್ಲಪ್ಪ ಶೆಟ್ಟಿ, ಹುಚ್ಚಣ್ಣ, ಮಲ್ಲಮ್ಮ ಎಲ್ಲರೂ ಬಂದು ನಮಸ್ಕರಿಸಿ ಸಂತಸದ ದನಿಯಲ್ಲಿ ಸರ್ಪಭೂಷಣರು.

"ನಾನೀಗ ತೀರ್ಥಯಾತ್ರೆಗೆ ಹೋಗ್ತಾ ಇದ್ದೀನಿ"

"ಅಂದ್ರೆ...ಎಲ್ಲಿ ಎಲ್ಲಿಗೆ ?" ಎಂದರು ಮಲ್ಲಪ್ಪ ಶೆಟ್ಟರು.

"ಶ್ರೀಶೈಲ, ಕಾಶಿ, ಕೂಡಲ ಸಂಗಮ, ಮುಂತಾದ ಪವಿತ್ರ ಸ್ಥಳಗಳು"

"ಹ್ಞಾಂ....ಅಷ್ಟು ದೂರ...." ಎಂದು ಉದ್ಗಾರ ತೆಗೆದಳು ಮಲ್ಲಮ್ಮ.

"ಅದ್ಕೇನಮ್ಮ..."

"ಹೌದು....ಅಷ್ಟೆಲ್ಲಾ ದೂರ ಒಬ್ಬರೇ..." ಎಂದರು ಚೆನ್ನಮ್ಮ

"ಅದಕ್ಕೇನಮ್ಮ ಎಲ್ಲಾದಕ್ಕೂ ದೇವರು ಇದ್ದಾನೆ"

ತಾಯಿಯು ಕಣ್ಣಿನ ತುದಿಯಲ್ಲಿ ಬರುತ್ತಿದ್ದ ನೀರನ್ನು ಸೀರೆಯ ಸೆರಗಿನಲ್ಲಿ ಒರೆಸಿಕೊಳ್ಳುತ್ತಿದ್ದುದನ್ನು ಕಂಡ ಮಲ್ಲಿಕಾರ್ಜುನಪ್ಪನವರು "ಶುಭ ಕಾರ್ಯಕ್ಕೆ ಹೋಗುವಾಗ ಯಾಕೆ ಕಣ್ಣೀರು ಹಾಕ್ತೀಯೆ ?"

"ಏನಿಲ್ಲ....ಒಳ್ಳೆಯದಾಗ್ಲಿ ಅಂತ್ಲೇ ಆ ದೇವರಲ್ಲಿ ಬೇಡಿಕೊಳ್ತಾ ಇದ್ದೇನೆ ಪ್ಞಾ...ಬಂದೆ"

ಎಂದು ಕೋಣೆಯೊಳಗೆ ಹೋಗಿ ಕುಡಿಕೆಯಲ್ಲಿ ತುಂಬಿದ್ದ ಹಣವನ್ನು ತಂದು ಸರ್ಪಭೂಷಣರ ಕೈಯಲ್ಲಿ ಕೊಡುತ್ತಿದ್ದಂತೆಯೇ ಎಲ್ಲರೂ ತಮ್ಮ ತಮ್ಮ ಕೋಣೆಗೆ ಹೋಗಿ ಹಣವನ್ನು ತಂದು ಎಲ್ಲರೂ ಅವರ ಪಾದದ ಮುಂದೆ ಸುರಿಯಲು,

"ಇದೇನು ಎಲ್ಲರೂ....ಇಷ್ಟೊಂದು ಹಣ....ಕೊಟ್ಟಿದ್ದೀರಿ ? ಯಾಕೆ ನನಗೆ ?"

"ಯಾತ್ರೆಗೆ—ಖರ್ಚಿಗೆ..."

"ನಮಗೇಕೆ ? ಯಾವ ಊರಿಗೋದ್ರೂ ಅಲ್ಲಿ ಭಕ್ತರು ನಮ್ಮ ಕೆಲಸ ನಡಿಸ್ತಾರೆ"

"ಕಷ್ಟಕಾಲಕ್ಕೆ ಬೇಕೇ ಆಗುತ್ತೆ....ಇಟ್ಟುಕೊಳ್ಳಿ..."

ಎನ್ನಲು ಎಲ್ಲವನ್ನು ತೆಗೆದುಕೊಂಡು,

"ನಾನಿನ್ನು ಬರುತ್ತೇನೆ"

ಎನ್ನಲು "ಆಗಲೀ" ಎಂದು ಬೀಳ್ಕೊಟ್ಟರು. ಪೂರ್ವಾಶ್ರಮದ ತಂದೆ–ತಾಯಿಗಳು ಮಗನು ಹೋಗುತ್ತಿದ್ದುದನ್ನೇ ನೋಡುತ್ತಾ ತಾವೇ ಮರೆತು ನಿಂತರು.

ಗಲಗಾಲಿಂದು ಬೆಂಗಳೂರಿನಿಂದ ಕಾಲ್ನಡಿಗೆಯಲ್ಲಿ ಸರ್ಪಭೂಷಣರ ದೇಶಾಟನೆ ಸಾಗಿತು.

ಚಿತ್ರದುರ್ಗದ ಬೃಹನ್ ಮಠಕ್ಕೆ ಬಂದು ಕರ್ತೃ ಗದ್ದಿಗೆಯ ದರ್ಶನವನ್ನು ಪಡೆದು ಜಗದ್ಗುರು ಮುರುಘಾಶಾಂತವೀರ ಸ್ವಾಮಿಗಳವರ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿ ಚರ್ಚೆಗಳಲ್ಲಿ ಭಾಗವಹಿಸಿದಾಗ ಗುರುಗಳು ಸರ್ಪಭೂಷಣರ ಜಾಣತನ, ಬುದ್ಧಿಯನ್ನು ತಿಳಿದು ಇಲ್ಲೇ ಇರಿ ಎಂದು ಕೇಳಿದರು. ಆದರೂ ಅದಕ್ಕೊಪ್ಪದೆ ದಾವಣಗೆರೆ, ಹರಿಹರ, ಹಾವೇರಿ ಬಂಕಾಪುರಗಳ ಮಾರ್ಗವಾಗಿ ಹುಬ್ಬಳ್ಳಿಗೆ ಬಂದು ಅಲ್ಲಿನ ಮೂರುಸಾವಿರ ಮಠದ ಗುರುಗಳ ದರ್ಶನ ಪಡೆದು ವಿಚಾರ ವಿನಿಮಯ ನಡೆಸಿದರು. ಅಲ್ಲಿಯೂ ಸಹ ಗುರುಗಳು ಸರ್ಪಭೂಷಣರ ಸಾಹಿತ್ಯ, ಸಂಗೀತ, ಪ್ರವೀಣತೆಯನ್ನು ನೋಡಿ "ಇಲ್ಲಿಯ ಮಠಕ್ಕೆ ಸ್ವಾಮಿಗಳು ಬೇಕು" ಎಂದು ಕೇಳಲು,

"ಬುದ್ಧಿ ಇದುವರೆಗೆ ಅನೇಕ ಮಠ ಮಾನ್ಯಗಳು ಸುತ್ತಿ ಬಂದಿರುವೆ. ಆದರೆ ಎಲ್ಲರೂ ಇದೇ ಮಾತನ್ನೇ ಆಡುತ್ತಿದ್ದಾರೆ. ಯಾಕೋ ತಿಳಿಯದು. ನಾನು ಎಲ್ಲೂ ಇರಲಾಗದು ಬೆಂಗಳೂರಿಗೆ ಹೋಗಬೇಕು ಬುದ್ಧಿ"

"ಎಲ್ಲಾ ನಿಮ್ಮ ಬುದ್ಧಿ ನೋಡಿ, ದಿವ್ಯ ತೇಜಸ್ಸು ನೋಡಿ"

"ಅಂಥ ಪವಾಡಪುರುಷನೇ ನಾನು"

"ಹೌದು ಆ ಅವತಾರದಲ್ಲಿ ಬಂದಿರುವುದರಿಂದ ಎಲ್ಲರಿಗೂ ನೀನು ಬೇಕಾಗಿರುವುದು. ನೋಡಿದವರೆಲ್ಲಾ ಇರಿ ಅನ್ನುವುದು"

"ಏನೋ ನಿಮ್ಮಂಥವರ ಆಶೀರ್ವಾದ ನಮ್ಮಮೇಲೆ ಇದ್ದರೆ ಮುಂದಾದರೂ ಒಳ್ಳೆಯದಾಗುತ್ತದೆ"

"ಅದು ಪ್ರತಿಯೊಬ್ಬ ಹಿರಿಯ ಮಠಾಧಿಕಾರಿಗಳು ಬಯಸುವುದು"

"ಸದ್ಯ ಅಷ್ಟಾದರೆ ಸಾಕು ಬುದ್ಧಿ"

"ದೇವರು ನಿಮಗೆ ಒಳ್ಳೆಯದನ್ನು ಕರುಣಿಸಲಿ, ಹೋಗಿಬನ್ನಿ" ಎಂದು ಬೀಳ್ಕೊಟ್ಟರು.

ಗದುಗಿನ ಮಾರ್ಗವಾಗಿ ಪಯಣ ಮುಂದುವರೆಯಿತು.

ಎಲ್ಲಿ ಹೋಗಲಿ ಶಿವಭಕ್ತರ ಆದರದ ಸುಸ್ವಾಗತ, ಹೊಸ ಹೊಸ ಜನರ ಪರಿಚಯ, ಸ್ಥಳಗಳನ್ನು ತೋರಿಸುವ ವಿವರಿಸುವ ಜನರಿಗೇನು ಕಡಿಮೆಯಾಗಿರ

ಲಿಲ್ಲ ಸರ್ಪಭೂಷಣರಿಗೆ. ಬಾದಾಮಿಯನ್ನು ತಲುಪಿದಾಗಲೂ ಅದೇ ಸ್ವಾಗತ! ಕುದುರೆ ಗಾಡಿಯೊಂದರ ಮೇಲೆ ಕುಳಿತು ಮೇಣಬಸತಿ, ಬನಶಂಕರಿ, ಮಹಾಕೂಟ, ಶಿವಮಂದಿರ ಎಲ್ಲಾ ಸ್ಥಳಗಳನ್ನು ನೋಡಲು ಹೊರಟರು. ಆ ಕುದುರೆ ಗಾಡಿಯಾತ ಎಲ್ಲದರ ಪರಿಚಯ ಮಾಡಲಾರಂಭಿಸಿದ. ಕುದುರೆಗೆ ಹುಲ್ಲು ಹಾಕಿ "ಮೇಣಬಸದಿ" ಗೆ ನಡೆದ. ಬೆಟ್ಟದ ಮೊದಲ ಗುಹೆಗೆ ಕರೆದುಕೊಂಡು ಹೋದ. ಅಲ್ಲಿ ಶಿಲ್ಪ ಸೌಂದರ್ಯವನ್ನು ನೋಡಿದರು. ಮೇಲ್ಭಾಗದಲ್ಲಿ ಬಣ್ಣದ ಕಲೆಯೂ ಕಾಣುತ್ತಿತ್ತು. ಅದನ್ನು ತೋರುತ್ತಾ ಆತ "ಇದು ಶಿವ, ವಿಷ್ಣು, ಎತ್ತು, ಆನೆಗಳು ಎಷ್ಟು ಚೆನ್ನಾಗಿ ಕೆತ್ತಿದ್ದಾರೆ. ನೋಡಿ ಬುದ್ಧಿ. ಈ ಕಂಬದಲ್ಲಿ ನೋಡಿ ಮಕ್ಕಳು ನಾಲ್ಕು ತರಹ ಇವೆ. ಇದು ಹರಿಹರ, ಭೃಂಗಿ ಋಷಿರೀ" ಮತ್ತೆ ಎರಡನೆಯ ಗುಹೆಗೆ ಹತ್ತಿ ಆಯಿತು. ಅಲ್ಲಿ,

"ವರಹಾವತಾರ, ಬಲಿ ಚಕ್ರವರ್ತಿ, ಇದು ಸಂಗೀತ, ನೃತ್ಯ ಶಿಲ್ಪಕಲೆ. ಸಮುದ್ರಮಥನದ ಚಿತ್ರಗಳು ಕಣ್ಣುಗಳನ್ನು ತಣಿಸಿದುವು.

ಮೂರನೇ ಗುಹೆಗೆ ಹೋಗುತ್ತಿದ್ದಂತೆಯೇ ಕೆಳಗಡೆಯ ಬಲಗಡೆ ಇದ್ದ ಪುಷ್ಕರಣಿಯನ್ನು ತೋರುತ್ತಾ—

"ಅದು ಅಗಸ್ತ್ಯ ತೀರ್ಥದ ಪುಷ್ಕರಣಿ ರೀ... ಇಲ್ಲಿ ಪುಲಿಕೇಶಿ ಮನೆತನದವರಿಗೆ ಕುಷ್ಠರೋಗ ನಿವಾರಣೆಯಾಯಿತಂತೆ. ಇಲ್ಲಿ ಒಂದು ವರ್ಷ ಆತ ಝಳಕ ಮಾಡಿದ. ಇದರಲ್ಲಿ ವನಸ್ಪತಿ ನೀರು ಬರೋದ್ರಿಂದ್ಲೂ ಒಂದು ಕಾರಣ ಇರಬೇಕು. ಅಂತ್ಲೂ ಕೆಲವರು ಹೇಳ್ತಾರ್ರೀ"

ಮೂರನೇ ಗುಹೆ ಪ್ರವೇಶಿಸುತ್ತಿದ್ದ ಆತ—

"ಇದು ಮೂರನೇ ಚಾಳುಕ್ಯ ರಾಜನ ಕಾಲದಲ್ಲಿ ಆದದ್ದಂತೆ ಇಲ್ಲಿ ವಿಷ್ಣುಮೂರ್ತಿ, ನರಸಿಂಹಾವತಾರ, ಚಲೋದ ಕಂಬವನ್ನು ಕೆತ್ತ್ಯಾನ್ರೀ..."

ನಾಲ್ಕನೆಯ ಗುಹೆಯಲ್ಲಿದ್ದ ಜೈನ ದೇವಾಲಯಗಳನ್ನು ತೋರಿಸಿ

"ಇದು ಇಪ್ಪತ್ನಾಲ್ಕು ತೀರ್ಥಂಕರರು ಗೊಮ್ಮಟ ಮಹಾವೀರರು ರೀ..." ಎಲ್ಲವನ್ನೂ ತೋರಿಸಿ ಇಳಿಯುತ್ತಿದ್ದಂತೆಯೇ—

"ಬುದ್ಧೀ" ಎನ್ನಲು ಅವನಿಗೆ ಸ್ವಲ್ಪ ಹಣವನ್ನು ಕೊಟ್ಟು ಕುದುರೆ ಗಾಡಿಯನ್ನು ಹತ್ತಿದರು. ಬನಶಂಕರಿಗೆ ಹೋಗಿ ಅಮ್ಮನವರ ದರ್ಶನ ಮಾಡುವ

ಉದ್ವೇಗದಿಂದ ಹೊರಟರು. ಅಲ್ಲೊಂದು ಪುಷ್ಕರಣಿ. ಅದನ್ನು ತೋರುತ್ತಾ ಅತ ಇಲ್ಲಿಗೆ ವೈಶಾಖ ಶುದ್ಧ ಪೌರ್ಣಿಮೆಯ ದಿನ ಗಂಗೆ ಬಂದು ಸೇರುವುದರಿಂದ ಇದು ಕಾಶಿ ತೀರ್ಥದಷ್ಟೇ ಶ್ರೇಷ್ಠ" ಎಂದ. ಅಲ್ಲಿ ಸ್ನಾನವಾಯಿತು. ಬನಶಂಕರಮ್ಮನ ದರ್ಶನವೂ ಆಯಿತು.

ಅಲ್ಲಿಂದ ಮಹಾಕೂಟದ ದೇವಾಲಯಕ್ಕೆ ಭೇಟಿ. ಹಿಂತಿರುಗುವಾಗ ಸಾಯಂಕಾಲ ಹಸಿರು ಹೊಲಗಳ ಮಧ್ಯೆ ಕೆಂಪು ಮಣ್ಣಿನ ರಸ್ತೆಯಲ್ಲಿ ಕುದುರೆ ಗಾಡಿ ಬಾದಾಮಿಯನ್ನು ತಲುಪಿತು. ಹಳ್ಳ ದಿಣ್ಣೆಗಳನ್ನು ಇಳಿದು ಹತ್ತಿ ಸುಮಾರು ಸಂಜೆಯ ಹೊತ್ತಿಗೆ ಬಾದಾಮಿಯನ್ನು ಮುಟ್ಟಿತು. ಅಲ್ಲಿ ಶಿವಭಕ್ತರೊಬ್ಬರು ಗುರುಗಳನ್ನು ಕಂಡು ನಮಸ್ಕರಿಸಿ ಪಾದಪೂಜೆಗಾಗಿ ಕರೆದುಕೊಂಡು ಹೊರಟರು

ಅಲ್ಲಿ ದುರ್ಗಾದೇವಿ, ರಾವಳಪಡಿ, ವಿರೂಪಾಕ್ಷ, ಉತ್ಸಪ್ಪಯ್ಯ ಕೊಂತಿದೇವಿ, ಮೇಣ ಬಸದಿ, ಜೈನ ದೇವಾಲಯ. ಲಾಡ್ಖಾನ ಮುಂತಾದವುಗಳನ್ನು ನೋಡಿದರು. "ಎಂಥ ದೇವಸ್ಥಾನಗಳು, ಎಂಥ ಶಿಲ್ಪಿಗಳು ? ಈಗ ಇಷ್ಟೊಂದು ಪಾಳಾಗಿವೆಯಲ್ಲ" ಎಂದು ಮನದಲ್ಲೇ ನೊಂದುಕೊಂಡು ನಡೆದರು ಕಲೆಯ ಬೀಡನ್ನು ನೋಡಿ ಕಣ್ಣಿಗೇನು ಹೊಟ್ಟೆಯೂ ತುಂಬಿದಂತಾಯಿತು.

ಅಲ್ಲಿನ ಕಲೆಯನ್ನೆಲ್ಲಾ ತೋರಿದ ಶಿಷ್ಯರಿಗೆ ತಮ್ಮ ಜೋಳಿಗೆಯಲ್ಲಿದ್ದ ಹಣ್ಣು, ರೊಟ್ಟಿಗಳನ್ನು ಕೊಟ್ಟರು. ಅವರು ಸಂತೋಷದಿಂದ ಸ್ವೀಕರಿಸಿ ಗುರುಗಳಿಗೆ ನಮಸ್ಕರಿಸಿ ಹೊರಟರು.

ಗುರುಗಳಿಗೆ ಈ ಕಲೆಯ ಬೀಡು, ಐತಿಹಾಸಿಕ ನಾಡು, ಕಣ್ಣಿಗೆ ಕಟ್ಟಿದಂತಾಯಿತು. ರಾತ್ರಿ ಪ್ರಯಾಣ ಬೆಳೆಸಲಾರದೆ ಅಲ್ಲೊಬ್ಬನನ್ನು

"ಇಲ್ಲಿ ಮಠಮಾನ್ಯಗಳಾವುವು ಇಲ್ಲವೆ ?" ಎಂದರು.

"ಮಠ ಯಾವುದೂ ಇಲ್ಲ. ಲಿಂಗಾಯಿತರ ಮನೆಯಿದೆ. ಅಲ್ಲಿದ್ದು ನಾಳೆ ಹೋಗಬಹುದು. ನಾವು ಲಿಂಗಾಯತರೇ ನಮ್ಮ ಮನೆಗೆ ಬಂದು ಬಡವರ ಆತಿಥ್ಯ ಸ್ವೀಕರಿಸಿ ಹೋಗಿ"

ಎನ್ನಲು ಒಪ್ಪಿ ಹೊರಡುವರು. ಸ್ನಾನ ಪೂಜೆಯಾಯಿತು. ಮನೆಯೊಡತಿ ಜೇಳೆ ಹುಳಿ, ಜೋಳದ ರೊಟ್ಟಿ, ಅನ್ನ ಮಾಡಿ ಮಜ್ಜಿಗೆ ಬೆಣ್ಣೆಯಿಲ್ಲದ ಊಟ ಹಾಕಿ...

"ಗುರುಗಳೇ ತಾವೇನು ತಿಳಿದುಕೊಳ್ಳಬೇಡಿ. ಈ ಊರಿನಲ್ಲಿ ಹಾಲು, ಮೊಸರು, ಅಷ್ಟಾಗಿ ಸಿಕ್ಕುವುದು ಸ್ವಲ್ಪ ಕಷ್ಟ. ತರಕಾರಿ ಇಲ್ಲ. ಬಡವರ ಮನೆಯಲ್ಲಿ ಇದ್ದುದನ್ನು ಮಾಡಿದ್ದೇನೆ. ಇದನ್ನೇ ದೊಡ್ಡದೆಂದು ತಿಳಿದು ಸ್ವೀಕರಿಸಬೇಕು ಎನ್ನಲು "ನಾನೇನೂ ತಿಳಿದುಕೊಳ್ಳುವುದಿಲ್ಲ. ಇದೇ ನನಗೆ ಭಕ್ಷ್ಯಭೋಜ್ಯಗಳಮ್ಮ ದೇವರು ನಿಮಗೆ ಒಳ್ಳೆಯದನ್ನು ಮಾಡುತ್ತಾನೆ" ಎಂದು ಹೇಳಿ ಊಟ ಮುಗಿಸಿದರು. ಬೆಳಿಗ್ಗೆ ಪಟ್ಟದಕಲ್ಲಿಗೆ ಪಯಣ ಮುಂದುವರಿಸಿದರು.

‡ ‡ ‡ ‡

ಪ್ರಶಾಂತವಾದ ಪವಿತ್ರ ಕೂಡಲ ಸಂಗಮ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಂತೆಯೇ ಮಹಾಕ್ಷೇತ್ರವು ಸರ್ಪಭೂಷಣರಿಗೆ ಮಹದಾನಂದವನ್ನು ತಂದಿತು. ಕೃಷ್ಣ-ಮಲಪ್ರಭಾ ನದಿಗಳ ಸಂಗಮದಲ್ಲಿನ ಸಂಗಮೇಶ್ವರನ ದೇವಾಲಯ ಕಣ್ಣಿಗೆ ಬಿತ್ತು. ಪವಿತ್ರ ನದಿಗಳನ್ನು ದೂರದಿಂದ ನೋಡಿದಾಗಲೇ ಜೀವನ ಪಾವನವಾಯಿತು. ಅದರಲ್ಲಿ ಸ್ನಾನ ಮಾಡುವ ಕಾತುರ ಹೆಚ್ಚಾಗಿ ದಡಕ್ಕೆ ಬಂದು ಬಟ್ಟೆಯನ್ನು ತೆಗೆದು ಒಗೆದುಕೊಂಡು ಸ್ನಾನಮಾಡಲು ಮನಸ್ಸಿಗೆ ಯಾವುದೋ ರೀತಿಯ ಆನಂದವುಂಟಾಯಿತು. ಕೂಡಲ ಸಂಗಮೇಶ್ವರನ ದರ್ಶನವಾಯ್ತು. ಅಲ್ಲಿನ ಪೂಜಾರಿಯು

"ಗುರುವೇ ತಾವು ಎಲ್ಲಿಂದ ಬಂದಿರಿ?" ಎಂದು ಪ್ರಶ್ನಿಸಲು

"ಬೆಂಗಳೂರಿಂದ" ಎಂದರು.

"ಪ್ರಸಾದವನ್ನು ಸ್ವೀಕರಿಸುವಿರಂತೆ ನಮ್ಮ ಮನೆಯಲ್ಲೇ ಬನ್ನಿ" ಎಂದು ಕರೆದುಕೊಂಡು ಹೋಗಿ ಜೋಳದ ರೊಟ್ಟಿ, ಅನ್ನ, ಮೊಸರು ಕುಟ್ಟಿದ ಕಡ್ಲೇಕಾಯಿ ಚಟ್ನಿ, ಬದನೇಕಾಯಿ ಪಲ್ಯ ಎಲ್ಲವನ್ನೂ ತಂದು ನೀಡಿದರು. ಊಟ ಮಾಡಿ ತೃಪ್ತಿ ಹೊಂದಿದರು. ನಂತರ ಪೂಜಾರಿಯು

"ತಾವು ವಿಶ್ರಾಂತಿ ತೆಗೆದುಕೊಳ್ಳಬೇಕಾದರೆ ಈ ದೇವಾಲಯದಲ್ಲೇ ಒಂದು ಕೋಣೆ ಕೊಡುತ್ತೇವೆ. ತಾವು ಇಲ್ಲೇ ಇದ್ದು ದೇವರ ಸೇವೆ ಮಾಡಬಹುದು" ಎನ್ನಲು

"ಅಗತ್ಯವಾಗಿ ಅಷ್ಟು ಉಪಕಾರ ಮಾಡಿದರೆ ಸಾಕು"

ಎನ್ನಲು ಮಂಚ, ಹಾಸಿಗೆ ಎಲ್ಲವನ್ನು ಹಾಸಿ, ಪೂಜಾರಿ ಗುರುಗಳಿಗೆ ಅಣಿ ಮಾಡಿ ಅವರನನ್ನು ಕರೆದುಕೊಂಡು ಹೋಗಿ ತೋರಲು ಸಂತೋಷದಿಂದ ಅಲ್ಲಿ ವಿಶ್ರಾಂತಿ ತೆಗೆದುಕೊಂಡು ಸಾಯಂಕಾಲ ಮತ್ತೆ ದೇವರ ದರ್ಶನ ಮಾಡಿ

ಕೊಂಡು ಬಂದು ತಮ್ಮ ಕೋಣೆಯಲ್ಲಿ ಕುಳಿತರು. ಏನೋ ಮನದಲ್ಲಿ ಹೊಳೆದಂತಾಗಿ ತಾಳೆಯೋಲೆಗಳನ್ನು ತೆಗೆದುಕೊಂಡು

ಬರೆಯಲು ಆನುವಾದರು.

ಶ್ರೀ ಗಣಾಧಿಪತಯೇ ನಮಃ ॥ ಶ್ರೀ ಶಾರದಾ ಗುರುಭ್ಯೋ ನಮಃ॥

ಶ್ರೀ ಮಂತ್ರ್ಯಾಡಲ ಸಂಗಮ ವರಪ್ರಸಾದಾನ್ವಿತ ಶ್ರೀ ಮತ್ಪರಹಂಸ ಪರಿವ್ರಾಜಕಾಚಾರ್ಯ ಶ್ರೀ ಸರ್ಪಭೂಷಣ ಶಿವಯೋಗಿಗಳಿಂದ ವಿರಚಿತವಾದ ಮುಮುಕ್ಷು ಜನಂಗಳಿಗೆ ಅತ್ಯಂತೋಪಯುಕ್ತವಾದ ಸಕಲ ನಿಗಮಾಗಮ ಸಾರವಂ ಗರ್ಭೀಕರಿಸಿರುವ, ಸಮ್ಯ ಜ್ಞಾನಯುಕ್ತವಾದ "ವೇದಾಂತ ಶಿಖಾರತ್ನ ಪ್ರಕಾಶಿಕೆ" ಎಂಬ ವೇದಾಂತ ಮಹಾ ಸುಪ್ರ ಬಂಧವಂ ಬರೆವುದಕ್ಕೆ

॥ ಶುಭಮಸ್ತು-ನಿರ್ವಿಘ್ನಮಸ್ತು ॥

ಅನಾದಿ ಶಿವತತ್ತ್ವ, ಅನಾದಿ ಈಶ್ವರತತ್ತ್ವ, ಅನಾದಿ ಮಹೇಶ್ವರ ತತ್ತ್ವವೆಂಬ ಆದಿ ತ್ರಿತತ್ತ್ವಂಗಳು ತಾನಲ್ಲ ಶಂಕರ ಶಶಿಧರ ಗೌರೀಶ, ಕಾಲಕಂಠ, ಕಪಾಲ ಮಾಲಾಧರ, ಕಾಲಾಗ್ನಿ ರುದ್ರ, ಮಹಾಕಾಳ, ಮಹಾನಯನ ಪಾದ, ಊರ್ಧ್ವ ಪಾದ ರುದ್ರ ಏಕಪಾದ ರುದ್ರ, ಬ್ರಹ್ಮ ಕಪಾಲ ವಿಷ್ಣು ಕಪಾಲ ದಂಡವ ಪಿಡಿದಾಡುವ ಪ್ರಳಯ ಕಾಲ ರುದ್ರರು ತ್ರಿಶೂಲ ಖಟ್ವಾಂಗಧರರು, ಭೂಷಾ ಭಾವಾಪರರು. ಪಂಚಮುಖ ರುದ್ರರು, ಶೂನ್ಯಕಾಮನೆಂಬ ಮಹಾರುದ್ರ ಅನೇಕ ಮುಖ, ಒಂದು ಮುಖ, ಒಂದು ಅನೇಕ ಮುಖನಾಗಿ, ವಿಶ್ವರೂಪ ರುದ್ರರು, ಶಿವಾಧಿಕ ಮಹಾರುದ್ರ ಅಂಬಿಕಾಪತಿ; ಉಮಾಪತಿ, ಪಶುಪತಿಶಿವ ಮೊದಲಾದ ಗಣಾಧೀಶ್ವರರೆಂಬ ಮಹಾಗಣಂಗಳು ತಾನಲ್ಲ ॥ ೧ ॥

ತಾಳೆಯೋಲೆಯ ಮೇಲೆ ಅಕ್ಷರ ಮೂಡುತ್ತಿತ್ತು ಕುಳಿತರು. ಹರಳೆಣ್ಣೆಯ ದೀಪ ಜಾಜ್ವಲ್ಯಮಾನ್ಯನಾಗಿ ಪ್ರಕಾಶಿಸುತ್ತಿತ್ತು. ಸರ್ಪಭೂಷಣರಿಗೆ ಕವಿತಾ ಶಕ್ತಿ ಒಂದೇ ಸಮನಾಗಿ ಹೊರದೂಡಲಾರಂಭಿಸಿತು. ಸತತವಾಗಿ "ವೇದಾಂತ ಶಿಖಾರತ್ನ ಪ್ರಕಾಶಿಕೆ" ತತ್ತ್ವ ಗ್ರಂಥವು ಮುಂದುವರಿಯಿತು.

‡ ‡ ‡ ‡ ‡

ಅಂದು ಸಾಯಂಕಾಲದ ಸಮಯ ತಣ್ಣನೆ ಗಾಳಿಯು ಬೀಸುತ್ತಿದೆ. ಮನದಲ್ಲಿ ಯಾವುದೋ ಹೊಸ ಭಾವನೆ ಮೂಡಿ ಬಂದ ಹಾಗಾಯಿತು. ಕೃಷ್ಣ ಮಲ

ಪ್ರಭಾ ನಡಿಗಳು ಪ್ರಶಾಂತವಾಗಿ ಹರಿಯುತ್ತಿದ್ದುವು. ಹಿತವಾದ ವಾತಾವರಣವು ಕೋಣೆಯೊಳಗೆ ಕುಳಿತ ಸರ್ಪಭೂಷಣರನ್ನು ಹೊರಗೆ ಕರೆಸಿತು. ತಾಳೆಯೋಲೆಗಳನ್ನು ತೆಗೆದುಕೊಂಡು ಹೊರಗೆ ಬಂದು ನದಿಯ ಹತ್ತಿರದ ಬಂಡೆಯ ಮೇಲೆ ಕುಳಿತರು. ನದಿಯ ನೀರು ಮೆಲ್ಲನೆ ಬಂಡೆಯನ್ನು ಚುಂಬಿಸಿ ಹೆದರಿ ಮತ್ತೆ ಓಡಿತು. ಸರ್ಪಭೂಷಣರು ಮತ್ತೆ ಪ್ರಕೃತಿ ವೈಚಿತ್ರ್ಯವನ್ನು ನೋಡಿ ನಗುತ್ತಿರಲು ಮತ್ತೆ ಆಟವಾಡಲಾರಂಭಿಸಿತು. ನದಿಯ ನೀರಲ್ಲಿ ತಾಳೆಯೋಲೆಗಳನ್ನು ಅದ್ದಿ ಕುಳಿತರು. ಮನಸ ಭಾವನೆ ತಾಳೆಯೋಲೆಯ ಮೇಲೆ ಬರವಣಿಗೆಯನ್ನು ಮುಂದುವರಿಸಿತು.

"ಸಹಸ್ರ ಶಿರ, ಸಹಸ್ರ ಚಕ್ಷು, ಸಹಸ್ರಬಾಹು, ಸಹಸ್ರ ಪಾದವನುಳ್ಳ ವಿರಾಟ್ಪುರುಷ ದೇವರಲ್ಲ, ವಿಶ್ವತೋಮುಖ, ವಿಶ್ವತೋಚಕ್ಷು, ವಿಶ್ವತೋಬಾಹು ವಿಶ್ವತೋಪಾದವನುಳ್ಳ ವಿರಾಟ್ಪುರುಷ, ಮಹಾಪುರುಷ ತಾನಲ್ಲ. ತ್ವಂಪದ ತತ್‌ಪದ ಅಸಿ ಪದವೆಂಬ ವೇದಾಂತ ಪಾದತ್ರಯಂಗಳು ತಾನಲ್ಲ, ಜೀವ ಹಂಸ, ಪರಮಹಂಸ, ಪರಾಪರನೆಂಬ ಹಂಸತ್ರಯಂಗಳು ತಾನಲ್ಲ. ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಸದಾಶಿವರೆಂಬ ಪಂಚಮೂರ್ತಿಗಳು ತಾನಲ್ಲ ಆ ಸದಾ ಶಿವತತ್ತ್ವದಲ್ಲಿ ಉತ್ಪನ್ನವಾದ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ ಆತರೆಂಬ ಅಷ್ಟ ತನು ಮೂರ್ತಿಗಳು ತಾನಲ್ಲ. ಅಸ್ತಿ, ಮಾಂಸ, ಚರ್ಮ ನರ, ರೋಮ ಈ ಐದು ಪೃಥ್ವಿಯಿಂದಾದುವು ಪಿತ್ತ, ಶ್ಲೇಷ್ಮ, ಶುಕ್ಲ ಶೋಣಿತ ಮೂತ್ರ ಅಪ್ಪುವಿನಿಂದಾದುವು. ಪರಿವ ಪಾರುವ ಸುಳಿವ ಕೊಡುವ, ಅಗಲುವ ಈ ಐದು ವಾಯುವಿನಿಂದಾದವು. ವಿರೋಧಿಸುವ, ಅಂಜುವ, ನಾಚುವ, ಮೋಹಿಸುವ, ಆಹುದು, ಆಗದು ಎನಿಸುವ ಈ ಐದು ಆಕಾಶದಿಂದಾದುವು. ಇಂತೀ ಪಂಚಭೌತಿಕದ, ಪಂಚವಿಂಶತಿ ಗುಣಗಳಿಂದಾದ ದೇಹವು ತಾನಲ್ಲ"

ಲೇಖನಿಯು ಸತತವಾಗಿ ಮುಂದುವರಿಯಿತು. ಭಾವನಾ ಲಹರಿ ಸತತವಾಗಿ ಹರಿಯಲಾರಂಭಿಸಿತು. ಎರಡು ಮೂರು ವಚನಗಳನ್ನು ಬರೆದು ಮುಗಿಸಿದರು.

‡ ‡ ‡ ‡ ‡

ಹುನಗುಂದ ಮಾರ್ಗವಾಗಿ ಬಾಗಿಲು ಕೋಟೆಗೆ ಬಂದು ಗುರುಲಿಂಗ ಸ್ವಾಮಿಗಳನ್ನು ಭೇಟಿ ಮಾಡಿ ಅವರಿಗೆ ಅನುಗ್ರಹ ನೀಡಿ, ಕೆಲವು ದಿನಗಳು

ಅವರ ಮಠದಲ್ಲಿ ಉಳಿದರು. ಒಂದು ದಿನ ಊರ ಹೊರಗಡೆ ತಿರುಗಾಡಲು ಹೊರಟಿದ್ದಾರೆ. ದಾರಿಯಲ್ಲಿ ರೋಧನ ಕೇಳಲಾರಂಭಿಸಿತು. ಗಂಡನನ್ನು ಕಳೆದುಕೊಂಡ ಒಬ್ಬಳು ಹೆಂಗಸು ವಿಧವಾತನವನ್ನೂ ಸಹಿಸಲಾರದೆ ನನ್ನನ್ನು ಗಂಡನ ಜೊತೆಗೆ ಹೂಳಿ ಎಂದು ಕಣ್ಣೀರು ಸುರಿಸುತ್ತಿರಲು ಗುರುಗಳು ಅಲ್ಲಿಗೆ ನಡೆದು

"ಸ್ವಲ್ಪ ಸಮಾಧಾನ ತೆಗೆದುಕೊಳ್ಳಮ್ಮ. ಸಾವು ಯಾರನ್ನೂ ಬಿಟ್ಟದ್ದಲ್ಲ. ಒಂದಲ್ಲ ಒಂದು ದಿನ ನಾವೆಲ್ಲಾ ಹೋಗಲೇಬೇಕು. ಬಂದುದನ್ನು ಸೈರಿಸಿಕೊಳ್ಳಬೇಕು"

ಎಂದು ನಾನಾ ವಿಧವಾಗಿ ಆಕೆಗೆ ಸಮಾಧಾನ ಹೇಳಿ ಹೆಣವನ್ನು ಹೂ ು ವಂತೆ ಆಜ್ಞಾಪಿಸಿ ಹೊರಡುತ್ತಾರೆ.

ನಂತರ ಬೀಳಗಿ ಹಿರಿಯ ಮಠದ ಉಪಾಧ್ಯಕ್ಷರಾದ ಶ್ರೀ ಕರವೀರಪ್ಪ ಸ್ವಾಮಿಗಳನ್ನು ನೋಡಿ ಅವರಿಗೆ ಅನುಗ್ರಹ ನೀಡಿ ತೆರಳುವರು.

ಯಾಳಗಿ ಎಂಬ ಗ್ರಾಮಕ್ಕೆ ಬರುತ್ತಿದ್ದಂತೆಯೇ ಬಟ್ಟೆ ಹೊಲಿಯುವವರನ್ನು ನೋಡಿ

"ಒಂದು ಲಂಗೋಟಿ ಹೊಲಿದು ಕೊಡಿ" ಎಂದರು.

ಆಗಲಿ ಎಂದು ಆ ಅಂಗಡಿಯಾತ ಎರಡನ್ನು ಹೊಲಿದುಕೊಡಲು ಗುರುಗಳು

"ಯಾಕಪ್ಪಾ ಎರಡು, ಒಂದೇ ಸಾಕು ಮತ್ತೊಂದನ್ನು ನೀವೇ ತೆಗೆದುಕೊಂಡು ಯಾರಿಗಾದರೂ ಮಾರಿಕೊಳ್ಳಿ." ಎಂದು ಹಿಂದಕ್ಕೆ ಕೊಟ್ಟು ಹೊರಟರು.

ನಂತರ ವಿಜಾಪುರ ಮಾರ್ಗವಾಗಿ ಹೋಗುತ್ತಿರಲು. ಯಾರೋ ಹೊಸಬರ ಪರಿಚಯವಾಯಿತು.

"ಆಗ ತಾವು ಎಲ್ಲಿಗೆ ಹೋಗುತ್ತೀರಿ? ಎಂದಾಗ "ಸೊಲ್ಲಾಪುರಕ್ಕೆ" ಎಂದರು.

"ಅಯ್ಯೋ ಹೇಗಾದರೂ ಈ ಕಡೆ ಹೊಗ್ತಾ ಇದ್ದೀರಿ. ಇಲ್ಲೇ ಬಸವಣ್ಣನವರು ಹುಟ್ಟಿದ ಊರಾದ ಬಾಗೇವಾಡಿಯನ್ನೇಕೆ ನೋಡಿಕೊಂಡು ಹೋಗಬಾರದು?"

"ಹಾಗಾ......"

ಎಂದು ಅಲ್ಲಿಗೆ ಹೋಗುವ ಮನಸ್ಸನ್ನು ಮಾಡಿದರು. ಬಸವೇಶ್ವರ

ದೇವಾಲಯದಲ್ಲಿ ಪೂಜೆ ಆಯಿತು. ಸರ್ಪಭೂಷಣರು ಅಲ್ಲಿನ ಪೂಜೆ ಮುಗಿಸಿ ಕೊಂಡು ಪೂಜಾರಿಯನ್ನು ಕುರಿತು—

"ಇಲ್ಲಿ ಬಸವಣ್ಣನವರು ಹುಟ್ಟಿದ ಬೀದಿ ಮನೆ ಇದೆಯಂತಲ್ಲಾ ಸ್ವಲ್ಪ ತೋರಿಸ್ತೀರಾ ?"

"ಆಗಲೀ ಪೂಜ್ಯರೇ" ಎಂದು ಅವರೊಬ್ಬರು ಬಂದರು ತೋರಿಸಲಿಕ್ಕೆ ಸ್ವಲ್ಪ ದೂರದ ಪ್ರಯಾಣವಾದ ಮೇಲೆ ಬ್ರಾಹ್ಮಣರ ಬೀದಿಯನ್ನು ತಲುಪಿ ಒಂದು ಮನೆಯನ್ನು ತೋರುತ್ತಾ –

ಇದೇ ಬೀದಿ ಸ್ವಾಮಿ, ಅದೇ ಮನೆಯಂತೆ "ಬಸವಣ್ಣ ನವರದು" ಎಂದಾಗ, ಒಂದು ಪವಿತ್ರ ಭಾವನೆಯು ಅವರಲ್ಲಿ ಮೂಡಿ ಬಂತು, ಹಾಗೆಯೇ ಮನದಲ್ಲಿ ನಮಿಸಿ ಅಲ್ಲಿಂದ ಹೆಜ್ಜೆ ಇಟ್ಟರು.

ನಂತರ ಸೊಲ್ಲಾಪುರಕ್ಕೆ ಪ್ರಯಾಣ !

ಶಿವಭಕ್ತರ ಮನೆಗಳಲ್ಲಿ ಮಠಗಳಲ್ಲಿ ಪೂಜೆ, ದಾಸೋಹ ಸ್ವೀಕಾರ ! ಮಹಾಶರಣ ಸಿದ್ಧರಾಮನ ಕೆರೆ, ಗದ್ದುಗೆಯ ದರ್ಶನ, ಮಲ್ಲಿಕಾರ್ಜುನನ ಮಹಾದರ್ಶನ !

ಬಿಸಿಲು, ವಿಪರೀತ ಬಿಸಿಲು. ಹತ್ತಾರು ಮೈಲಿಗಳನ್ನು ನಡೆಯು ತ್ತಿದ್ದಂತೆಯೇ ಬಾಯಾರಿಕೆ, ಬೆಂಗಳೂರಿನಲ್ಲಿದ್ದ ಸರ್ಪಭೂಷಣರಿಗೆ ಇಷ್ಟೊಂದು ಬಿಸಿಲಿನಲ್ಲಿ ನಡೆದ ಅನುಭವ ಇರಲಿಲ್ಲ. ಸ್ವಲ್ಪ ದೂರದಲ್ಲೇ ನದಿ ಹರಿಯುತ್ತಿದ್ದುದು ಕಂಡಿತು. ಅದು ಭೀಮಾನದಿ. ನೀರನ್ನು ಕುಡಿಯಲು ಇಳಿದು ಕೈ ಕಾಲು ಮುಖ ತೊಳೆದುಕೊಂಡು ಬೊಗಸೆಯಲ್ಲಿ ನೀರು ಕುಡಿಯ ಲಾರಂಭಿಸಿದರು. ಸುಗಂಧದ ವಾಸನೆ ರುಚಿಯಾದ ಇಂಥ ನೀರನ್ನು ಕುಡಿದು ಅನುಭವವಿರಲಿಲ್ಲ. ಹೊಟ್ಟೆ ತುಂಬಾ ಕುಡಿದು ಸ್ವಲ್ಪ ಹೊತ್ತು ನೆರಳಲ್ಲಿ ವಿಶ್ರಮಿಸಿಕೊಂಡು ಮತ್ತೆ ಪ್ರಯಾಣ ಸಾಗಿತು.

‡ ‡ ‡ ‡ ‡

ಕೆಲವು ದಿನಗಳಾದ ಮೇಲೆ ಮತ್ತೆ ಪ್ರಯಾಣಕ್ಕೆ ಸಿದ್ಧತೆ ನಡೆಯಿತು. ಬೆಳಗಾದಮೇಲೆ ನಿತ್ಯಕರ್ಮಗಳು ಆಗಲೇಬೇಕಲ್ಲ, ಸ್ನಾನಕ್ಕಾಗಿ ಕೊಳವನ್ನು ಹುಡುಕುತ್ತಾ ಹೊರಟರು. ರಾಯಚೂರು, ಮುದಗಲ್ಲು ದಾಟಿ "ಅಗಸಿ"

ಎಂಬ ಊರಿನ ಹತ್ತಿರದ "ಸುರಪುರ" ಎಂಬ ದಾಟುತ್ತಿದ್ದಂತೆಯೇ ಒಂದು ಸಣ್ಣ ಬಾವಿ ಕಂಡಿತು.

ಅಕ್ಕಪಕ್ಕದಲ್ಲಿ ಹೂ ಗಿಡಗಳು ಅಂದವಾಗಿ ಬೆಳೆದಿದ್ದುವು. ಪಕ್ಕದಲ್ಲಿ ಮರವೊಂದು ನೆರಳನ್ನೀಯುತ್ತಿತ್ತು. ಪೂಜಾ ಸಾಹಿತ್ಯವನ್ನೆಲ್ಲಾ ಸಿದ್ಧಪಡಿಸಿ ಸ್ನಾನ ಮಾಡಿ ಬಂದು ಕುಳಿತರು. ಅಷ್ಟರಲ್ಲಿ ಜೇವರಿಗೆ ಕಡೆಯಿಂದ ಒಬ್ಬ ವ್ಯಾಪಾರಿ ಈ ದಾರಿಯಲ್ಲಿ ಬರುತ್ತಿದ್ದ ಶಿವಯೋಗಿಗಳು ಕುಳಿತಿದ್ದುದನ್ನು ನೋಡಿ ಗುರುಗಳಿಗೆ ನಮಸ್ಕರಿಸುವ ಉದ್ದೇಶದಿಂದ ಬಂದು ಅಡ್ಡಬಿದ್ದನು.

"ಗುರುಗಳೇ ತಾವು ಯಾರು ? ಎಲ್ಲಿಂದ ಬಂದಿರಿ ? ಈಗ ಎಲ್ಲಿಗೆ ಹೋಗಿದ್ದೀರಿ?" ಎಂಬ ನಾನಾ ಕುಶಲ ಪ್ರಶ್ನೆಗಳಿಗೆ ಉತ್ತರವಾಗಿ ಅವರು.

"ನನ್ನ ಹೆಸರು ಸರ್ಪಭೂಷಣ ಸ್ವಾಮಿ ಅಂತ. ನಮ್ಮ ಸ್ಥಳ ಬೆಂಗಳೂರು ಈಗ ನಾನು ಕಲ್ಬುರ್ಗಿ ಮಾರ್ಗವಾಗಿ ಕಲ್ಯಾಣಕ್ಕೆ ಹೋಗಲಿದ್ದೇನೆ. ತಾವಾರು ?"

"ನಾನು ಜೇವರಿಗೆಯವನೇ ಹೊಸಪೇಟೆಗೆ ನಮ್ಮ ಸ್ವಂತದವರ ಮನೆಗೆ ಹೊರಡುತ್ತಿದ್ದೇನೆ. ಗುರುಗಳನ್ನು ಕಂಡರೆ ನನಗೆ ಅಪಾರ ಪ್ರೇಮ ತಮ್ಮನ್ನು ನೋಡಿ ನಮಸ್ಕರಿಸಿ ಹೋಗೋಣ ಅಂತ ಬಂದೆ ಬುದ್ಧಿ. ತಮ್ಮ ದರ್ಶನ ಪಡೆದ ನಾನೇ ಧನ್ಯ ಗುರುದೇವಾ ?"

"ತಮ್ಮ ಗುರುಭಕ್ತಿ ಅಗಾಧವಾದುದು. ದೇವರು ನಿಮಗೆ ಒಳ್ಳೆಯದನ್ನುಂಟುಮಾಡಲಿ. ಬಿಸಿಲು ಏರುತ್ತದೆ. ನಿಮ್ಮ ಪ್ರಯಾಣವನ್ನು ಮುಂದುವರಿಸಿ ನಾನು ಇನ್ನು ಶಿವಪೂಜೆಗೆ ಕುಳಿತುಕೊಳ್ಳುತ್ತೇನೆ"

"ಅಂದಹಾಗೇ ತಮ್ಮ ಸ್ನಾನ ಎಲ್ಲಿ ಆಯಿತು. ಗುರುಗಳೇ ?"

"ಇದೋ ಇಲ್ಲೇ ಕಾಣ್ತಾ ಇಲ್ಲಾ ಆ ಬಾವಿಯಲ್ಲಿ"

"ಆಂ....ಎಂಥ ಕೆಲಸ ಆಯ್ತು ?"

" ಹಾಗೆಂದರೆ ?"

"ಬುದ್ಧಿ, ತಮ್ಮಂಥ ಶಿವಾಚಾರ್ಯರು ಈ ಹೊಲೆಯರ ಬಾವಿಯ ನೀರು ತೆಗೆದುಕೊಂಡು ಶಿವಪೂಜೆ ಮಾಡಿದರಾ? ಇದರಿಂದಲೇ ಶಿವಪೂಜೆಯೇ? ಆದುದರಿಂದಲೇ ಇದು ಊರ ಹೊರಗಡೆಯೇ ಇರುವುದು. ಪಾಪ ಬೇರೆ

ಊರಿಂದ ಬಂದವರಿಗೆ ಹೇಗೆ ತಿಳಿಯಬೇಕು ? ಇದರ ಬಗ್ಗೆ ಇಲ್ಲಿ ಏನಾದರೂ ಬರೆಸಬಹುದಿತ್ತು "

"ತಾವು ಸುರಪುರಕ್ಕೆ ಏಕೆ ಹೋಗಬಾರದಿತ್ತು ? ಅಲ್ಲಿ, ಮಠ ಮಾನ್ಯಗಳಿಲ್ಲವೇ ? ಗುರುಸೇವೆ ಮಾಡುವವರು ತಾನೇ ಕಡಿಮೆಯೇ ?"

"ಬೇರೆಯವರಿಗ್ಯಾಕೆ ತೊಂದರೆ ಕೊಡಬೇಕು. ನಮ್ಮ ಕೆಲಸವನ್ನು ನಾವು ಮಾಡೋದು ಉತ್ತಮವಲ್ಲವೇ ?"

ಮಾತಿಗೆ ಮಾತು ನಡೆಯುತ್ತಿರಲು ಅಲ್ಲಿಗೆ ಕಲ್ಯಾಣದಿಂದ ಹಂಪೆಗೆ ಬರುತ್ತಿದ್ದ ಶರಣರ ಗುಂಪೊಂದು ಗುರುಗಳನ್ನು ನೋಡಿ ಬಂದು ನಮಸ್ಕರಿಸಿತು. ಕಲ್ಯಾಣ ಶೆಟ್ಟಿಯು ಬಂದು ಮುಂದಾಗಿ ನಿಂತುಕೊಳ್ಳಲು ಗುರುಗಳು—

"ತಾವಾರು ?" ಎನ್ನಲು

"ನಾನು ಕಲ್ಯಾಣ ಶೆಟ್ಟಿ ಅಂತ. ಇದೀಗ ಕಲ್ಯಾಣದಿಂದ ಹಂಪೆಗೆ ನಮ್ಮ ಪ್ರಯಾಣ ಬೆಳೆಸ್ತಾ ಇದ್ದೇವೆ."

ಮಾತು ಮುಂದುವರಿಯಿತು. ಪರಿಚಯವೆಲ್ಲಾ ಆದಮೇಲೆ ವರ್ತಕನು ಕಲ್ಯಾಣ ಶೆಟ್ಟಿಯನ್ನು ಕುರಿತು—

"ಏನು ಸ್ವಾಮಿ ಗುರುಗಳು ಈ ಹೊಲೆಯರ ಬಾವಿಯಲ್ಲಿ ಸ್ನಾನ ಮಾಡಿ ಶಿವಪೂಜೆಗೆ ಕುಳಿತಿದ್ದಾರಲ್ಲಾ ಏನು ಗತಿ ? ಎಂಥ ಅಪಚಾರವಾಯಿತು. ಈ ಊರಿನವರಿಗೆ ರವೆಯಷ್ಟೂ ಬುದ್ಧಿ ಯಿಲ್ಲ. ಇಲ್ಲಿ ಒಂದು ತಿಳಿವಳಿಕೆ ಪಟ್ಟಿಯನ್ನಾದರೂ ಇರಿಸಬಾರದಿತ್ತೆ ? ಈಗೇನು ಮಾಡುವುದು ? ಅದರ ಬಗ್ಗೆ ನಾವು ಅಷ್ಟು ಹೊತ್ತಿನಿಂದಲೂ ಮಾತನಾಡುತ್ತಿದ್ದೆವು. ಅಷ್ಟರಲ್ಲಿ ನೀವು ಬಂದಿರಿ"

"ಅದು ಪವಿತ್ರ ತೀರ್ಥವೇ...."

ಆ ಮಾತನ್ನು ಕೇಳಿ ಪೆಚ್ಚಾಗಿ

"ಇದೇನು ಹೀಗೆ ಹೇಳ್ತಿದ್ದಾರೆ ?"

"ಗುರುಗಳು ಪಾದವನ್ನು ನೀರಲ್ಲಿ ಇಟ್ಟಾಗಲೇ ಆ ನೀರು ಪವಿತ್ರವಾಯಿತು. ಜಂಗಮ ಪಾದ ಮಹತ್ತ್ವದಿಂದ ಎಂಥದ್ದೂ ಶ್ರೇಷ್ಠವಾಗುತ್ತೆ. "ಗಂಗೆಗೆಕಟ್ಟಿಲ್ಲ ಲಿಂಗಕ್ಕೆ ಮುಪ್ರೆ ಇಲ್ಲ" ಎಂದು ಗಾದೆ ಹೇಳುವುದಿಲ್ಲವೇ ?

"ಏನು ನೀವು ಹೇಳುತ್ತಿರುವುದು ?"

"ಚರಸ್ಯ ಪಾದ ತೀರ್ಥೇನ ಲಿಂಗ ಮಜ್ಜನ ಮುತ್ತಮಂ"

ಎಂದು ಆಗಮಗಳೇ ಹೇಳಿರುವಾಗ ಏನು ಅವರು ಪಾದ ಮುಟ್ಟಿದ ನೀರು ಶಿವ ತೀರ್ಥವೇ ಸರಿ. ಇನ್ನು ಆ ನೀರಿನಲ್ಲಿ ಸ್ನಾನ ಪೂಜೆ ಮಾಡಿದರೆ ಏನು ತಪ್ಪು ?

ಗುರುಗಳು ಕಲ್ಯಾಣ ಶೆಟ್ಟರ ಮಾತನ್ನು ಕೇಳಿ—

"ಬಹಳ ಒಳ್ಳೆಯ ಉತ್ತರವನ್ನೇ ನೀಡಿದಿರಿ ಕಲ್ಯಾಣ ಶೆಟ್ಟರೆ ಅದಕ್ಕೇ ಹೇಳುತ್ತಾರೆ ಹಿಂದಿನವರು. "ಶೆಟ್ಟಿ ಸಹವಾಸ ಮಾಡು ಲಿಂಗದ ಅಡಿಯನ್ನು ಸೇರು ಅಂತ" ಎಂದು. ಕೂಡಲೆ ವರ್ತಕ "ಗುರುವೇ ನಾನು ತಿಳಿಯದೆ ಹೇಳಿದೆ. ನನಗೆ ಕಲ್ಯಾಣ ಶೆಟ್ಟರ ಮಾತುಗಳಿಂದ ಈಗ ಗುರುಪಾದ ಧೂಳಿಯ ಮಹಾತ್ಮ್ಯ ಅರಿವಾಯಿತು"

"ನಮ್ಮದೇನು ಬಂತು ? ಎಲ್ಲ ಸರ್ಪಭೂಷಣ ಮಹಾ ಸ್ವಾಮಿಗಳದು ಅವರು ನನ್ನ ಬಾಯಿಯಲ್ಲಿ ಈ ವಿಷಯವನ್ನು ಹೇಳಿಸಿ ನಿಮಗೆ ಅರಿವಾಗುವಂತೆ ಮಾಡಿದರು. "

"ವರ್ತಕರೇ ಹೊಲೆಯರೂ ಮನುಷ್ಯರೇ ತಾನೆ ? ಅವರು ನೀರು ಮುಟ್ಟಿದಾಕ್ಷಣ ಅಪವಿತ್ರವಾಗುತ್ತದೆಯೇ ? ಅದೇ ಬೇರೆ ಜನರುಗಳು ಅದರಲ್ಲಿ ಗಲೀಜು ಮಾಡಿದರೆ ಅದು ಶುದ್ಧವಾಗುತ್ತದೆಯೇ ? ದೇವರು ಸೃಷ್ಟಿ ಮಾಡುವಾಗ ಹೊಲೆಯ, ಮಾದಿಗ, ಮೇಲು ಕೀಳು ಎಂದು ಸೃಷ್ಟಿಸಿಲ್ಲ. ಬಸವಣ್ಣನವರು ಹೇಳಿಲ್ಲವೇ ? ಹೊಲೆಯ ಯಾರು ಎಂದರೆ, "ಹೊಲಸು ತಿಂಬಾತನೇ ಹೊಲೆಯ" ಎಂದು. ನಾವು ಮಾಡುವ ಕೆಲಸಗಳ ಮೇಲೆ ನಾವು ಆಯಾಯ ಮನುಷ್ಯರಾಗುತ್ತೇವೆ ಅಷ್ಟೇ "

"ಹೌದು, ಗುರುಗಳು ಹೇಳುವುದರಲ್ಲಿ ನೂರಕ್ಕೆ ನೂರುಪಾಲು ಸತ್ಯವಿದೆ ಜ್ಞಾನಿಗಳು ಅದನ್ನು ತಿಳಿಯದೇ ಸ್ನಾನ ಮಾಡಿ ಶಿವಪೂಜೆಗೆ ಕುಳಿತರೇ ?"

"ಹೌದು ಶೆಟ್ಟರೇ ನನ್ನದೇ ತಪ್ಪು. ಕ್ಷಮಿಸಿ ಬುದ್ಧಿ"

"ನೀವೇನು ಅಂತ ತಪ್ಪು ಮಾಡಿಲ್ಲ. ನಾನು ಕ್ಷಮಿಸಬೇಕಾದುದೂ ಇಲ್ಲ. ನೀವು ಮುಂದಾದರೂ ಅರಿತು ನಡೆಯಲು ಈ ಘಟನೆ ನಡೆದುದು ಸಹಾಯವಾಯಿತು. "

"ಹೌದು ಗುರುದೇವಾ "

ಕಲ್ಯಾಣ ಶೆಟ್ಟರು ತಮ್ಮ ತಂಡದವರನ್ನುದ್ದೇಶಿಸಿ—

"ಇದು ಪವಿತ್ರವಾದ ಬಾವಿಯಾಯಿತು. ಇದು ಗುರು ಸರ್ಪಭೂಷಣ ಶಿವಯೋಗಿಗಳ ಪಾದ ಸ್ಪರ್ಶದಿಂದ ಪಾವನವಾಯಿತು. ಇದಕ್ಕೆ "ಸರ್ಪಭೂಷಣ ಶಿವಯೋಗಿಗಳ ಬಾವಿ" ಎಂದು ಹೆಸರಾಗಲಿ... ಸರ್ಪಭೂಷಣರಿಗೇ...."

"ಉಘೇ.... ಉಘೇ...." ಎಂದು ಎಲ್ಲರೂ ದನಿಗೂಡಿಸಿದರು. "ಇಲ್ಲಿ ಸ್ನಾನ ಮಾಡಿದವರಿಗೆ ಸಕಲ ಖಾಯಿಲೆಗಳೂ ಪರಿಹಾರವಾಗುತ್ತವೆ. ಜೀವ ಪುಣ್ಯ ಪುನೀತವಾಗುತ್ತದೆ. ಬುದ್ಧಿ. ತಮ್ಮ ದರ್ಶನದಿಂದ ನಾವೆಲ್ಲ ಧನ್ಯರಾದೆವು. ನಾವಿನ್ನು ಬರುತ್ತೇವೆ. ಅಪ್ಪಣೆ ಕೊಡಿಸಿ. ತಮ್ಮ ಶಿವಪೂಜೆಗೆ ಇನ್ನು ಹೊತ್ತಾಗುತ್ತದೆ."

"ನೀವು ಹೋಗಿ ಬನ್ನಿ ಆ ಮಹಾದೇವನು ನಿಮಗೆ ಸನ್ಮಂಗಳಗಳನ್ನುಂಟುಮಾಡಲಿ."

ಎನ್ನುತ್ತಿದ್ದಂತೆಯೇ ಅಡ್ಡ ಬಿದ್ದರು. ಗುರುಗಳು ಆಶೀರ್ವದಿಸಿ ಎಲ್ಲರನ್ನು ಬೀಳ್ಕೊಟ್ಟರು. ವರ್ತಕ ಮಾದಪ್ಪ ಹಾಗೆಯೇ ನಿಂತಿರಲು ಗುರುಗಳು.

"ಏಕೆ ನೀವು ?"

"ಇಲ್ಲ ಗುರುವೇ, ನಾನು ನಿಮ್ಮಂಥವರ ಸಂಗದಲ್ಲಿ ಕೆಲವು ದಿವಸಗಳಿದ್ದು ನನ್ನ ಜೀವನದ ಪಾಪಗಳನ್ನು ಕಳೆದುಕೊಳ್ಳಬೇಕಾಗಿದೆ ಎನ್ನಿಸುತ್ತದೆ."

"ಹಾಗೆಯೇ ಆಗಲಿ ಮಾದಪ್ಪನವರೇ ಬಹಳ ಸಂತೋಷ" ಎಂದು ಶಿವ ಪೂಜೆಗೆ ಅಣಿಮಾಡಿದರು. ಪೂಜೆ ಆನಂದವಾಗಿ ದುರಂಧುರೆಯಾಗಿ ನಡೆಯಿತು.

ವಿಷಯ ಸುರಪುರದ ಪ್ರಧಾನ ಮಂತ್ರಿ ಲಿಂಗಣ್ಣನವರಿಗೂ ತಿಳಿಯಿತು ಅವರೂ ಸಹ ಅಲ್ಲಿಗೆ ಸಾರೋಟಿನಲ್ಲಿ ಬಂದರು. ಗುರುಗಳಿಗೆ ದೀರ್ಘ ದಂಡ ನಮಸ್ಕಾರವೆರಗಿ ತಮ್ಮ ಪರಿಚಯುವನ್ನು ತಿಳಿಸಿ—

"ಗುರುಗಳೇ ತಮ್ಮ ವಿಷಯ ತಿಳಿಯಿತು. ಮಹಾತ್ಮರು ನಮ್ಮೂರತ್ತ ಪಯಣ ಬೆಳೆಸಿ, ತಮ್ಮ ಪಾದ ಧೂಳಿಯಿಂದ ಪಾವನ ಮಾಡಿದ್ದೀರಿ. ಇಲ್ಲಿ ಹೊಲೆಯರ ಬಾವಿಯಿಂದಲೇ ತಾವು ಸ್ನಾನ ಮಾಡಿದರೆಂದು ತಿಳಿಸಿದರು. ಇನ್ನಾದರೂ ಅದು ಪವಿತ್ರವಾಗಿರಲಿ. ನಾನು ಈ ಊರಲ್ಲಿ ಮತ್ತೊಂದು ಹೊಲೆಯರಿಗಾಗಿ ಬಾವಿಯನು ತೆಗೆಸುತ್ತೇನೆ."

"ಯಾರಾದರೇನು ಅವರು ಮನುಷ್ಯರೇ ತಾನೇ ಲಿಂಗಣ್ಣನವರೇ. ನಿಮ್ಮ ಇಚ್ಛೆ ಒಂದು ಬಾವಿ ತೋಡಿಸಿ ಅವರಿಗೆ ಕೊಡುತ್ತೇನೆಂದರೆ ಬಹಳ ಸಂತೋಷ.

"ಅಂತು ನಿಮ್ಮ ಪಾದ ಮುಟ್ಟಿದಮೇಲೆ ಇಲ್ಲಿ ಈ ಬಾವಿಯ ನೀರು, ನಿನಾಗಿ ಉಳಿದಿಲ್ಲ. ತೀರ್ಥವಾಗಿ ಮಾರ್ಪಟ್ಟಿದೆ. ಇದರಿಂದ ಸ್ನಾನ ಮಾಡಿದವರಿಗೆ ಎಲ್ಲರ ಪಾಪಗಳು ಪರಿಹಾರವಾಗಲಿ, ರೋಗ ರುಜಿನಗಳು ವಾಸಿಯಾಗಲಿ. ಇದಕ್ಕೆ ಇಂದಿನಿಂದ ಸಪ್ಪಣ್ಣನವರ ಬಾವಿ ಎಂದೇ ಹೆಸರಾಗಲಿ"

"ಅಷ್ಟೆಲ್ಲಾ ಏಕೆ ಮಂತ್ರಿಗಳೇ ?"

"ತಾವು ನಮ್ಮ ಅರಮನೆಗೆ ಬಂದು ಅರಸರಿಗೂ ದರ್ಶನವಿತ್ತು ಹೋಗಬಹುದು" ಎನ್ನಲು "ಆಗಲಿ" ಎಂದರು.

ಸಪ್ಪಣ್ಣನವರು ಆಗತಾನೇ ಶಿವಪೂಜೆ ಮುಗಿಸಿ ಗುರುಗಳು ಕಲ್ಬುರ್ಗಿಯತ್ತ ಹೊರಡಲು ಅನುವಾಗಿದ್ದರು. ಅಷ್ಟರಲ್ಲಿ ಊರ ಜನರಿಗೆಲ್ಲಾ ಈ ವಿಚಾರ ತಿಳಿದು ತಂಡೋಪ ತಂಡವಾಗಿ ಬಂದು ಗುರುಗಳಿಗೆ ದೀರ್ಘ ದಂಡ ನಮಸ್ಕಾರ ಮಾಡಿ "ಸರ್ಪಭೂಷಣರಿಗೇ ಜಯ...ಜಯ..." ಎಂದು ಜಯಘೋಷ ಮಾಡಿದರು. ಆಗ ಅವರಲ್ಲೊಬ್ಬ ಅವರನ್ನುದ್ದೇಶಿಸಿ—

"ಗುರುಗಳೇ ತಾವು ನಮ್ಮ ಸುರಪುರಕ್ಕೆ ತಮ್ಮ ಪಾದಯಾತ್ರೆ ಮಾಡಿ ನಮ್ಮ ಊರನ್ನು ಪಾವನ ಮಾಡಬೇಕು"

ಎನ್ನಲು ಆಗಲಿ ಎಂದು ಸಾರೋಟನ್ನು ಹತ್ತಿ ಅರಮನೆಗೆ ಹೊರಟರು. ಆ ಊರಲ್ಲಿ ಕೆಲವು ದಿನಗಳು ಭಕ್ತರ ಮನೆಯಲ್ಲಿ ಆನಂದದಲ್ಲಿ ಕಾಲ ಕಳೆದರು.

‡ ‡ ‡ ‡ ‡

ಸರ್ಪಭೂಷಣರಿಗೆ ಅನುಭವ ಮಂಟಪವೆಂದು ಪ್ರಸಿದ್ಧಿಯಾಗಿದ್ದ ಬಸವಕಲ್ಯಾಣ ನೋಡಲೇಬೇಕೆಂಬ ಮನಸ್ಸಾಯಿತು. ಹುಮ್ನಾಬಾದ್ ಮಾರ್ಗವಾಗಿ ಪ್ರಯಾಣ ಬೆಳೆಸಿದರು. ಊರೂರುಗಳನ್ನು ಸುತ್ತಿ ಸಂಜೆ ಹೊತ್ತಿಗೆ ಬಸವ ಕಲ್ಯಾಣವನ್ನು ತಲುಪಿದರು. 'ಬಸವಕಲ್ಯಾಣ ಮಂದಿರ' ದಲ್ಲಿ ಒಂದು ಕೋಣೆಯನ್ನು ಪಡೆದು ಉಳಿದುಕೊಂಡರು. ಅಲ್ಲಿ ತಾವೇ ಸಿದ್ಧಪಡಿಸಿದ ಊಟದೊಂದಿಗೆ ರಾತ್ರಿಯನ್ನು ಕಳೆದರು. ಆದರೂ ಮನದಲ್ಲಿ ಪವಿತ್ರ ಕ್ಷೇತ್ರವನ್ನು ಸಂಪೂರ್ಣ ನೋಡುವ ತವಕ. ಬೆಳಕು ಹರಿಯುವುದು ಎಷ್ಟು

ಹೊತ್ತಿಗೇ ಎಂದೇ ಮಲಗಿದರು. ಕನಸಿನಲ್ಲಿಯೂ ಸಹ ಹಿಂದಿನ ಗತ ವೈಭವದ ಕಡೆ ಮನಸ್ಸು ಸರಿಯಿತು.

ಬೆಳಗ್ಗೆ ಏಳುತ್ತಿದ್ದಂತೆಯೇ ಆಗಸವೆಲ್ಲಾ ಮೋಡದಿಂದ ತುಂಬಿ, ಸಣ್ಣ ಸಣ್ಣ ಮಳೆ ಹನಿಯು ಸೋನೆ ಹಾಕಲಾರಂಭಿಸಿತು. ಆದರೂ ಸ್ನಾನ ಪೂಜೆ ಮುಗಿಸಿ ಸ್ಥಳಗಳನ್ನು ನೋಡಲು ಸಿದ್ಧರಾಗಿ ಆ ಊರಿನವರೊಬ್ಬರೊಡನೆ ಹೊರಟರು. ಬಸವೇಶ್ವರನ ಅರುಹಿನಮನೆ, ಬಸವೇಶ್ವರ ಮಂದಿರ ನೋಡಿದರು. ಪರುಷ ಕಟ್ಟೆಗೆ ಬಂದರು. ಅವರ ಜೊತೆ ಬಂದಿದ್ದವರು, "ಇದೇ ಬಸವಣ್ಣನವರು ನ್ಯಾಯ ಮಾಡುತ್ತಿದ್ದ ಸ್ಥಳ" ಎಂದರು. ಅಲ್ಲಿಂದ ಪ್ರಯಾಣ ಮುಂದುವರಿಯಿತು. ಮಳೆ ಸ್ವಲ್ಪ ನಿಂತು ತಂಪಾದ ಗಾಳಿ ಬೀಸಲಾರಂಭಿಸಿತು. ಮಳೆ ಅವರು ಎಲ್ಲಾ ಸ್ಥಳಗಳನ್ನ ನೋಡಲೀ ಅಂತಲೇ ನಿಂತಿತೋ ಏನೋ ಅನ್ನಿಸುವಂತಾಯಿತು. ಸುತ್ತಮುತ್ತಣ ಹಸಿರು, ಮರಗಿಡಗಳು ಕಣ್ಣಿಗೆ ಹಿತವನ್ನು ತಂದಿತು. ನಂತರ ಪ್ರಭುದೇವರ ಗದ್ದುಗೆಯನ್ನು ನೋಡಿ ಕೈ ಮುಗಿದು ನಂತರ ಅಕ್ಕ ನಾಗಮ್ಮನವರ ಗವಿಯನ್ನು ನೋಡುತ್ತಾ ಬರುತ್ತಿರಲು ದಾರಿಯಲ್ಲಿ "ಮಡಿವಾಳ ಮಾಚಿದೇವನ ಕುಂಡ" ಎಂದು ಬರೆದಿತ್ತು. ಅದನ್ನು ನೋಡಿ ಬಂದಿದ್ದವರು, "ಇಲ್ಲೇ ಮಡಿವಾಳ ಮಾಚಿದೇವರು ಶರಣರ ಬಟ್ಟೆಗಳನ್ನು ಒಗೆಯುತ್ತಿದ್ದ ಸ್ಥಳವಂತೆ" ಎನ್ನಲು; ನೀರನ್ನು ತೆಗೆದುಕೊಂಡು ಇಬ್ಬರೂ ತಲೆಗೆ ಪ್ರೋಕ್ಷಿಸಿಕೊಂಡು ದಾರಿಯಲ್ಲಿ ಬರುತ್ತಿದ್ದಂತೆಯೇ ರುದ್ರ ಮುನಿಯ ಗವಿಯನ್ನೂ ಬಿಲ್ವಪತ್ರೆಗಳ ತೋಟದ ಮೂಲಕ ಹಾಯ್ದು ಹೋಗಿ ಪವಿತ್ರ ಸ್ಥಳವನ್ನೂ ಸಂದರ್ಶಿಸಿದರು. ಅಲ್ಲಿಂದ ಅನುಭವ ಮಂಟಪಕ್ಕೆ ಪ್ರವೇಶ.

"ಇಲ್ಲೇ ಅನುಭವ ಮಂಟಪ ಇತ್ತೆಂದು ಪ್ರತೀತಿ ಗುರುಗಳೇ" ಎಂದು ಆತ. ಇಬ್ಬರೂ ನಮಿಸಿದರು.

ತ್ರಿಪುರಾಂತಕನ ಕೆರೆ. ಘನಲಿಂಗೇಶ್ವರ ದೇವಾಲಯಗಳನ್ನೂ ನೋಡಿದರು. ನಂತರ ಹರಳಯ್ಯನ ಕುಂಡ, ಅಮೃತಕುಂಡ, ಶಿವಪುರ ಶಿವಾಲಯ, ನಾರಾಯಣಪುರದ ಶಿವಾಲಯ, ಸಸ್ತಾಪುರದ ಬಂಡವಾರ, ಚನ್ನಬಸವ ತೀರ್ಥ, ಗಟ್ಟಿವಾಲಯ್ಯನ ಗವಿ, ಮೋಳಿಗೆ ಮಾರಯ್ಯನ ಗವಿ ಮುಂತಾದುವುಗಳನ್ನು ನೋಡಿದರು.

ಸರ್ಪಭೂಷಣರಿಗೆ ಬಸವಕಲ್ಯಾಣದ ಸಂಪೂರ್ಣ ದರ್ಶನವಾಯಿತು.

‡ ‡ ‡ ‡ ‡

ಕೃಷ್ಣಾ ಭೀಮಾ ನದಿಗಳ ಸಂಗಮದ "ನಾರದ ಗಡ್ಡೆ !" ಯಾದವ ಗಿರಿಯ ಮಠಾಧಿಪತಿಗಳಾದ ಶ್ರೀಮಾನ್ ನಿರಂಜನ ಪ್ರಣವ ಸ್ವರೂಪಿಗಳಾದ ಚೆನ್ನಬಸವ ಸ್ವಾಮಿಗಳು ಅನುಷ್ಠಾನ ಮಾಡಿದ ಪವಿತ್ರ ಸ್ಥಳಕ್ಕೆ ಬಂದರು. ಊರಿಗೆ ಹೋಗಿ ಅಲ್ಲಿನ ಜನರಿಗೆ ಏಕೆ ತೊಂದರೆ ಕೊಡಬೇಕು ಎಂಬ ಮನಸ್ಸಿನಿಂದ ಅಲ್ಲೇ ನದಿಯ ಹತ್ತಿರ ಪೂಜೆಗೆ ಅಣಿಮಾಡಿಕೊಂಡು ಕುಳಿತರು. ಸರ್ಪಭೂಷಣರು ಪೂಜೆಯಲ್ಲಿ ನಿರತರಾದರು. ಆಗ ಅಲ್ಲಿನ ಕೆಲವು ಚರಮೂರ್ತಿಗಳು ಬಂದು ನೋಡಿದರು. ಅವರಲ್ಲೇ ಗುಸು ಗುಸು ಮಾತುಗಳಾರಂಭವಾದುವು.

"ಇವಂಗೆ ಪೂಜೆ ಮಾಡ್ಲಿಕ್ಕೆ ಬರೋಲ್ಲ"

."ಇಲ್ಲ ಈಗೊಂದು ಕೆಲಸ ಮಾಡಬಹುದಲ್ಲಾ"

" ಏನು ?"

"ನಮ್ಮ ಭಕ್ತರೊಬ್ಬರ ಮನೆಯಲ್ಲಿ ಪೂಜೆ ಇಡಿಸೋಣ. ಆಗ ತಿಳಿಯುತ್ತೆ"

"ಹೌದು ಸರಿಯಾದ ಉಪಾಯ" ಎಂದು ಪೂಜೆ ಮುಗಿದ ಮೇಲೆ—

"ಗುರುಗಳೇ ಏಕೆ ನಮ್ಮೂರಲ್ಲಿ ಎಷ್ಟು ಜನ ಭಕ್ತರಿಲ್ಲ. ನೀವೇಕೆ ಇಲ್ಲೇ ಮಾಡಬೇಕಿತ್ತು ? ಬನ್ನಿ...ಬನ್ನಿ..." ಎಂದು ಸ್ವಾಗತಿಸಿ ಕರೆದುಕೊಂಡು ಹೋದರು. ಭಕ್ತರ ಮನೆಯಲ್ಲಿ ಪೂಜೆಗೆ ಏರ್ಪಾಡಾಯಿತು. ಸಪ್ಪಣ್ಣನವರು ಪೂಜೆಯನ್ನು ಮಾಡುತ್ತಾ ಯೋಗ ಮಗ್ನರಾಗಿ—

ಲಿಂಗ ಪೂಜೆಯ ಮಾಡಿರೋ । ನಿಮ್ಮೊಳಿ ಪ್ರಾಣ
ಲಿಂಗ ಪೂಜೆಯ ಮಾಡಿರೋ ।
ಗಂಗೆ ಯಮುನೆಗಳ । ಸಂಗಮದೊಳು ಮಿಂದು
ಶೃಂಗಾಟದುಪರಿಯ ರಂಗ ಮಂಟಪದೊಳ ॥ ಪಲ್ಲವಿ ॥
ಪರಭಕ್ತಿ ಜಲವ ನೀಡಿ । ಮಜ್ಜನಗೆಯ್ದು ।
ವಿರತಿ ಗಂಧವನೆ ತೀಡಿ ।
ಕರಣೇಂದ್ರಿಯಗಳೆಂಬ । ಮಿರುಗುವ ಕ್ಷತೆಯನಿ
ಟ್ಟರಿವೆಂಬ ನಿರ್ಮಲ । ಸರಸ ಪುಷ್ಪವ ಮಾಡಿ ॥ ೧ ॥

ಹರುಷವೆಂಬ ಧೂಪವ | ಸಮರ್ಪಿಸಿ |
ಪರಬಿಂದು ರುಚಿ ದೀಪವ
ನಿರವೆತ್ತಿ ಪರಿಪೂರ್ಣ | ನೈವೇದ್ಯವನು ಮಾಡಿ
ಮರೆವ ತ್ರಿಗುಣವೆಂಬ | ವರ ತಾಂಬೂಲವ ಕೊಟ್ಟು ॥ ೨ ॥
ಕರದಿಷ್ಟ ಲಿಂಗವಿದೆ | ಶರೀರದಲ್ಲಿ
ಪರವಸ್ತು ತಾನಾಗಿದೆ |
ಹೊರಗೊಳಗೆರಡೆನ್ನ | ದರಿವರಿವನೆ ಮೀರಿ
ಗುರು ಸಿದ್ಧನಂಘ್ರಿಯೋಳ್ | ಬೆರದೇಕಮಯವಾಗಿ ॥ ೩ ॥

ಎಷ್ಟೋ ಹೊತ್ತಿನ ಮೇಲೆ ಎಚ್ಚತ್ತರು ಗುರುಗಳು. ಎಲ್ಲಾ ಚರ ಮೂರ್ತಿಗಳೂ.

"ಗುರುಗಳೇ ನಾವು ತಮಗೆ ಪೂಜೆ ಮಾಡಲಿಕ್ಕೆ ಬರೋಲ್ಲ ಅಂತ್ಲೇ ಈ ತಂತ್ರ ಹೂಡಿ ಇಲ್ಲೇ ತಮ್ಮ ಪೂಜೆ ಏರ್ಪಡಿಸಿದ್ದೆವು. ಆದರೆ ತಮ್ಮಂಥ ಪುಣ್ಯ ವಂತರ ಪೂಜೆಯನ್ನು ನೋಡಿ ತಮ್ಮಿಂದ ಪ್ರಸಾದ ಸ್ವೀಕರಿಸುವ ಭಾಗ್ಯವನ್ನು ಪಡೆದ ನಾವೇ ಧನ್ಯರು ನಮ್ಮನ್ನು ಕ್ಷಮಿಸಿ"

ಎಲ್ಲರೂ ಅಡ್ಡ ಬಿದ್ದರು. ಗುರುಗಳು ನಗುತ್ತಾ "ಪರವಾಗಿಲ್ಲ ಬಿಡಿ" ಎಂದು ಅವರನ್ನು ಸಂತೈಸುವರು, ಎಲ್ಲರೂ ಗುರುಗಳ ಮೃದು ಹೃದಯವನ್ನು ನೋಡಿ ಆಶ್ಚರ್ಯ ಚಕಿತರಾದರು.

‡ ‡ ‡ ‡ ‡

ಜೇಳ್ಳಗುರ್ಕಿ, ಜೋಳದ ರಾಶಿ ಗ್ರಾಮವನ್ನು ದಾಟಿ ಬಳ್ಳಾರಿಗೆ ಬರುತ್ತಿ ರಲು ಶಿವಭಕ್ತರ ಬೀದಿಯಲ್ಲಿ ಜನರು ಗುಂಪುಗಟ್ಟಿಕೊಂಡಿದ್ದಾರೆ, ಏನೇನೋ ಕೂಗಾಟಗಳು. ಜನರು ನಗುತ್ತಾ ನಿಂತಿದ್ದಾರೆ. ಆ ಗಲಭೆ ಗುರು ಸರ್ಪ ಭೂಷಣರನ್ನೂ ನಿಲ್ಲಿಸಿತು.

"ಏನು? ಏನಾಗಿದೆ?" ಎಂದು ಅವರಲ್ಲಿ ಒಬ್ಬರನ್ನು ಪ್ರಶ್ನಿಸಲು.

"ಗಂಡ-ಹೆಂಡತಿಯರ ಜಗಳ" ಎಂದರು.

ಗುರುಗಳು ಬರುತ್ತಿದ್ದಂತೆಯೇ ಜನರು ದಾರಿ ಬಿಟ್ಟರು. ನೇರವಾಗಿ ಮನೆ ಯನ್ನು ಪ್ರವೇಶಿಸಿದರು.

"ಏನಪ್ಪಾ ಅದು ? ಎಂದು ಮುಂದಾಗಲು ಆತ,

"ನೋಡಿ ಸ್ವಾಮಿ, ಈಕೆಯೇ ನನ್ನ ಹೆಂಡತಿ, ನನ್ನ ಮೇಲೆ ಕೈಮಾಡ್ತಾ ಇದ್ದಾಳೆ" ಎಂದ ಪಾಪ.

"ಏನಮ್ಮಾ ಇದು ಪತಿಯೇ ದೈವ ಅಂತ ಪೂಜಿಸಬೇಕಾದವಳೆ ಹೀಗಾದ್ರೆ ಹ್ಯಾಗೆ ಗಂಡನು, ಬಯ್ಯಲಿ ಹೊಡೆಯಲಿ ಕೈ ಮಾಡುವುದು ಅಂದ್ರೇನು ?"

"ನಿನಗೇನು ಹೋಗಯ್ಯಾ"

ಅಲಕ್ಷ್ಯದ ಮಾತನ್ನಾಡಲು. ಗುರುಗಳು ಸಮಾಧಾನಿಸುವ ದನಿಯಲ್ಲೇ

"ಏನಮ್ಮಾ ನನಗೇನೂ ಇಲ್ಲ. ನಾನು ಸಂನ್ಯಾಸಿ. ಮಾನ ಹೋಗ್ತಾ ಇರುವುದು ನಿಮಗಲ್ಲವೇ ? ಧರೆಯಲ್ಲಿ ಅದಕ್ಕೆ ಹೇಳೋದು "ಒಲಿದರೆ ನಾರಿ ಮುನಿದರೆ ಮಾರಿ ಅಂತ" ಮತ್ತೆ.—

ಧರೆಯೊಳೀ ಹೆಣ್ಣು ರಾಕ್ಷಸಿಯಲ್ಲದಿನ್ನುಂಟೆ ।
ನರರು ಬೇರಿಹುದೆಂದು ಪೇಳುವುದು ಪುಸಿಯು ॥ ಪಲ್ಲವಿ ॥

ನೋಡಿದರೆ ಮನವ ಮಾತಾಡಿದರೆ ಧನವ ನೋಡ ।
ಕೂಡಿದರೆ ಪ್ರಾಣಿಗಳ ಸೆಳೆದುಕೊಳ್ಳುವುದು ।
ಮಾಡಬಾರದನೆ ಮಾಡಿಸಿ ಕಡೆಗೆ ಯಮಭಟರು ।
ತಾಡನೆಗೆ ಹಿಡಿಗೊಟ್ಟು ಕೊಲ್ಲಿವುದರಿಂದೆ ॥ ೧ ॥

ತಂದೆ ತಾಯ್ಗಳನನುಜರಗ್ರಜರ ಸುತಹಿತರ
ಬಂಧು ಬಳಗ ವನೆಲ್ಲವಗಲಿಸುತ್ತೊಡನೆ
ಹಿಂದೆ ಕರೆದರೆ ಬರ್ಪ ನಾಯಂತೆ ಮಾಡಿಕೊಂ
ಡೊಂದು ಕಾಲದಿ ತನ್ನ ನುಂಗುವುದರಿಂದೆ ॥ ೨ ॥

ಜಪದ-ಕಣ್ ಮುಚ್ಚಿ ವ್ರತ ಶೀಲಗಳ ಬಾಯ್ ಬಡಿದು
ತಪಕೆ ಮಸಿಯನೆ ಹಚ್ಚಿ ತತ್ತ್ವಗಳ ತುಳಿದು
ಕುಪಿತ ಯೋಗಕ್ಕೆ ಕಂಟಕವಾಗಿ ಯತಿಜನರ
ನಪಹಾಸ್ಯಕೆಡೆ ಮಾಡಿ ಕೆಡಿಸುವುದರಿಂದ ॥ ೩ ॥

ಜನರೆಲ್ಲಾ "ಏನಮ್ಮಾ ಸ್ವಾಮಿಗಳನ್ನು ಏನನ್ನುತ್ತೀಯಾ, ನಿನಗೆ ತಲೆ ಕೆಟ್ಟಿದೆಯೇ ? ಎನ್ನಲು ಪೆಚ್ಚಳಂತೆ ನಿಂತು ಗುರುಗಳನ್ನು ನೋಡಿದಾಗಲೇ ಮನಸ್ಸು ಪರಿವರ್ತನೆಯಾದ ಹಾಗೇ ಆಗಿ, "ಬುದ್ಧಿ ಕೋಪದಲ್ಲಿ ಅಂದುಬಿಟ್ಟೆ ಕ್ಷಮಿಸಿ" ಎಂದು ಅಡ್ಡ ಬಿದ್ದಳು.

"ನಾನು ಕ್ಷಮಿಸಬೇಕಾದರೆ ಗಂಡನನ್ನು ಮೊದಲು ನಮಸ್ಕರಿಸಿ ಇನ್ನು ಹೀಗೆ ಮಾಡುವುದಿಲ್ಲ ಎನ್ನಬೇಕು"

"ಆಗ್ಲಿ ಬುದ್ಧಿ" ಎಂದು ಗುರುಗಳಿಗೆ ಮೊದಲು ಎರಗಿ ಗಂಡನಿಗೆ ನಮಸ್ಕರಿಸಿ "ಇನ್ನು ಸರಿಯಾಗಿ ನಡೆದುಕೊಂಡು ಹೋಗುತ್ತೇನೆ" ಎಂದಳು. ಜನರೆಲ್ಲ ಹೊರಟರು.

‡ ‡ ‡ ‡ ‡

ಗುರುಗಳನ್ನು ನೋಡಿದ ಅಲ್ಲಿನ ಒಬ್ಬ ಭಕ್ತನಾದ ರೊಟ್ಟಿ ವಿರೂಪಾಕ್ಷಪ್ಪನವರು ಅಂದು ತಮ್ಮ ಮನೆಗೆ ಗುರುಗಳನ್ನು ಕರೆದುಕೊಂಡು ಹೋಗಿ ಸೇವೆಯನ್ನು ಮಾಡಿದ. ಆತನ ಗುಣವನ್ನು ಸ್ವಲ್ಪ ಹೊತ್ತಿನಲ್ಲಿಯೇ ತೂಗಿದರು ಗುರುಗಳು. ತುಂಬಾ ಸಾಹುಕಾರನಾದರೂ ಹಮ್ಮಿಲ್ಲ, ಮೋಸವಿಲ್ಲ ಎಂಬುದುನ್ನು ಕೆಲವೇ ಸಮಯದಲ್ಲಿ ಅರಿತರು. ಈಗಾಗಲೇ ಊರೂರುಗಳಲ್ಲಿ ಭಕ್ತರಿಟ್ಟ ಕಾಣಿಕೆಗಳು ಜೋಳಿಗೆಯನ್ನು ತುಂಬಿದ್ದವು. ಅದನ್ನು ಏನು ಮಾಡಬೇಕೆಂಬುದೇ ತೋಚದೇ ಇಲ್ಲಿ ಅದನ್ನು ಇಟ್ಟು ಹೋಗಬೇಕೆಂಬ ಮನಸ್ಸಾಯಿತು. ಅವರ ಮನೆಯನ್ನು ಬಿಟ್ಟು ಹೋಗವ ದಿನ ವಿರೂಪಾಕ್ಷಪ್ಪನವರನ್ನು ಕರೆದು—

"ವಿರೂಪಾಕ್ಷಪ್ಪಾ ನಾನಿನ್ನು ಬರುತ್ತೇನೆ"

ಎನ್ನುತ್ತಿದ್ದಂತೆಯೇ ತಟ್ಟೆ ತುಂಬಾ ಫಲತಾಂಬೂಲವನ್ನು ತಂದು ನೀಡಿದರು. ಅದನ್ನು ಗಮನಿಸಿದ ಗುರುಗಳು—

"ಇದೇನು ವಿರೂಪಾಕ್ಷಪ್ಪಾ ನಾನೇ ನಿನಗೇ ನನ್ನಲ್ಲಿರುವ ಈ ಕಾಣಿಕೆಯ ರೂಪಿನಲ್ಲಿ ಬಂದಿರುವ ಹದಿನಾರುಸಹಸ್ರ ರೂಪಾಯಿಗಳನ್ನು ಇಟ್ಟು ಹೋಗಬೇಕೆಂದಿರುವೆ"

"ನಮಗೇಕೆ ಬುದ್ಧಿ ಇದು. ದೇವರು, ನಿಮ್ಮಂಥ ಗುರುಗಳು ಆಶೀರ್ವದಿಸಿರುವಾಗ"

"ಇದು ನಿಮ್ಮ ಹತ್ತಿರವೇ ಇರಲಿ. ನಾವಿನ್ನೂ ದೇಶ ಸಂಚಾರದಲ್ಲಿದ್ದೇವೆ ಬೇಕಾದಾಗ ನಾನು ನಿಮ್ಮಲ್ಲಿಗೆ ಹೇಳಿಕಳುಹಿಸುತ್ತೇನೆ. ಆಗ ಕೊಡುವಿರಂತೆ, "ದಾರಿಯಲ್ಲಿ ಇಷ್ಟೊಂದು ಹಣವನ್ನು ಇಟ್ಟುಕೊಂಡು ಹೋಗುವುದು ಕ್ಷೇಮವೂ ಅಲ್ಲ ನನಗೆ ಅಷ್ಟು ದಿನದಿಂದ ಆ ಪರಿವೆಯೇ ಇರಲಿಲ್ಲ. ಇಂದು ನೋಡಿಕೊಂಡು, ನಿಮ್ಮ ಹಾಲು ಹೃದಯ ನೋಡಿ, ಒಳ್ಳೆಯ ತನವನ್ನು ಗಮನಿಸಿ, ಇಲ್ಲೇ ಇಟ್ಟು ಹೋಗಬೇಕೆಂಬ ಮನಸ್ಸಾಯಿತು"

"ಅಗತ್ಯವಾಗಿ ಆಗಲಿ ಬುದ್ಧಿ, ಇಟ್ಟು ಹೋಗಿ ಭದ್ರವಾಗಿ ಇಟ್ಟಿರುತ್ತೇನೆ. ತಾವು ಎಂದು ಬೇಕಾದರೂ ಹೇಳಿ ಕಳುಹಿಸಿ ಅದನ್ನು ತೆಗೆದುಕೊಂಡು ಹೋಗಬಹುದು"

ಮನೆಯವರೆಲ್ಲಾ ಬಂದು ನಮಸ್ಕರಿಸಿದರು. ಗುರುಗಳು ಎಲ್ಲರನ್ನು ಆಶೀರ್ವದಿಸಿ, ಅವರ ಮನೆಯನ್ನು ಬಿಟ್ಟರು.

ಇಪ್ಪತ್ತೆರಡರ ಹರೆಯ, ತುಂಬ ಯೌವನದ ಮೈ ಮಾಟ, ತೀಕ್ಷ್ಣ ಕಣ್ಣುಗಳು, ಹಾಡಿಟ್ಟಂಥ ನೀಳ ಮೂಗು, ವಿಶಾಲವಾದ ಹಣೆಯ ಮೇಲೆ ವಿಭೂತಿಯ ಮೂರು ಪಟ್ಟಿಗಳು ಕೈ ಕೊರಳುಗಳಲ್ಲಿ ವಿಭೂತಿ, ರುದ್ರಾಕ್ಷಿ ಮಾಲೆಗಳು, ಕಿವಿಯಲ್ಲಿ ರುದ್ರಾಕ್ಷಿಯ ಅತ್ತಗಡುಕುಗಳು, ಗುಂಡು ತಲೆಗೆ ಕಾವಿಯ ಪೇಟ, ಮೈ ಮುಚ್ಚುವ ಕಫನಿ, ಹೆಗಲಮೇಲೆ ಉತ್ತರೀಯ. ಕೊರಳಿನಲ್ಲಿ ಬಟ್ಟೆಯಲ್ಲಿ ಕಟ್ಟಿದ ಇಷ್ಟಲಿಂಗ, ಮುಖದಲ್ಲಿ ದಿವ್ಯ ಕಾಂತಿ, ಆಜಾನುಬಾಹುಗಳು, ಉದ್ದ ಬೆರಳುಗಳು, ಎತ್ತರದ ದೇಹವು ಮರದ ಹಾವುಗೆಗಳನ್ನು ಮೆಟ್ಟಿಕೊಂಡು ತುಂಗ ಭದ್ರೆಯರ ಸಂಗಮದಲ್ಲಿ ಸ್ನಾನ ಮುಗಿಸಿ ಭಕ್ತರೊಬ್ಬರ ಮನೆಯಲ್ಲಿ ತಮ್ಮ ಶಿವಪೂಜೆ, ಬಿನ್ನಹ ತೀರಿಸಿಕೊಂಡು ಹೋಗುವ ಮನಸಮಾಡಿ ಊರಿನ ಒಳಗೆ ಬಂದರು.

ಅದೊಂದು ಶಿವಭಕ್ತರ ಮನೆ. ದಿವ್ಯ ಮೂರ್ತಿಗಳು ಬರುತ್ತಿರಲು ಮನೆಯೊಡತಿ ಮನೆಯ ಮುಂದೆ ಗುಡಿಸಿ, ನೀರಿಟ್ಟು, ರಂಗೋಲೆ ಬಿಡುತ್ತಿದ್ದಳು. ಗುರುಗಳು ತಮ್ಮ ಮನೆಯತ್ತ ಬರುತ್ತಿದ್ದುದನ್ನು ನೋಡಿ ಹಾಗೆಯೇ ನಿಂತಳು

ಗೌರಮ್ಮ ಬಿಳಿ ಸೀರೆಯುಟ್ಟು ತಲೆಯ ಕೂದಲನ್ನು ಗಂಟು ಹಾಕಿಕೊಂಡು ಸೆರಗಿನಿಂದ ತಲೆಯನ್ನು ಮುಚ್ಚಿ ಗಂಭೀರವಾಗಿ ನಿಂತಿದ್ದಳು. ಕೈಗಳು ಬಳೆಯನ್ನಗಲಿ, ಬೆಳ್ಳಿಯ ಕಡಗಗಳನ್ನಪ್ಪಿದ್ದುವು. ಕೆನ್ನೆಯಲ್ಲಿನ ಅರಿಶಿನ ಅಳಿಸಿತ್ತು, ಹಣೆಯ ಕುಂಕುವವನ್ನು ತಳ್ಳಿ ಮೂರು ರೇಖೆಯಲ್ಲಿ ವಿಭೂತಿ ಆಕ್ರಮಿಸಿತ್ತು. ಶಿವಭಕ್ತೆ ಗುರುಗಳು ಹತ್ತಿರ ಬರುತ್ತಿದ್ದಂತೆಯೇ—

“ತಾತಯ್ಯನವ್ರೇ......ತಾವು ಯಾವ ಊರು ? ಯಾವ ಕಡೆಯಿಂದ ದಯಮಾಡಿಸಿದಿರಿ” ಎಂದು ಕೇಳಲು—

“ನಾನು ಸಪ್ಪಣಾರ್ಯ, ಅಂತ ಕರ್ಣಾಟಕದವ್ನೇ ಕಣಮ್ಮ ಬೆಂಗಳೂರಿನಿಂದ ಯಾತ್ರಾರ್ಥಿಯಾಗಿ ಬಂದಿದ್ದೇನೆ” ಎಂದರು.

“ತಾವು ದಯಮಾಡಿಸಿ ನಮ್ಮ ಮನೆಯಲ್ಲಿ ಬಿನ್ನಹ ತೀರಿಸಿಕೊಂಡು ಹೋಗಬೇಕು.”

“ಅದಕ್ಕೇನಂತೆ ಆಗಬಹುದು ತಾಯೇ”

ಎನ್ನಲು ಸಂತೋಷದಿಂದ ಗೌರಮ್ಮ ಗುರುಗಳನ್ನು ಮನೆಯೊಳಕ್ಕೆ ಕರೆದುಕೊಂಡುಹೋಗಿ ಒಂದು ಚಾಪೆಯನ್ನು ಹಾಸಿ ಕುಳ್ಳಿರಿಸಿದಳು. ಕಡಾಯಿಯಲ್ಲಿ ನೀರು ಕಾದಿತ್ತು.

ಹಿತ್ತಲಲ್ಲಿ ಬೆಳೆದಿದ್ದ ಹೂಗಳನ್ನು ಆರಿಸಿ ತಂದು ಗೌರಮ್ಮ ಗುರುಗಳನ್ನುದ್ದೇಶಿಸಿ—

“ನೀರು ಕಾದಿದೆ ನೀವು ಸ್ನಾನ ಮಾಡುವಷ್ಟರಲ್ಲಿ ಪೂಜೆಗೆ ಅಣಿಮಾಡಿಬಿಡುತ್ತೇನೆ”

“ತಮ್ಮಿಷ್ಟ ಒಪ್ಪಿದ ಹಾಗೆ ಮಾಡಿ, ನಾನು ಮಡಿಯನ್ನು ಅಣಿ ಮಾಡುತ್ತೇನೆ”

ಎನ್ನಲು ಗುರುಗಳು ಎದ್ದು ಸ್ನಾನದ ಮನೆಗೆ ತೆರಳಿ ಸ್ನಾನವನ್ನು ಮಾಡಿ ಮಡಿಯುಟ್ಟು ದೇವರ ಮನೆಗೆ ಬಂದು ಶಿವಪೂಜೆಯಲ್ಲಿ ನಿರತರಾದರು.

ಇತ್ತ ಗೌರಮ್ಮನವರು ಅಡಿಗೆ ಸಿದ್ಧತೆಗಳನ್ನು ನಡೆಸುತ್ತಿದ್ದಾರೆ. ಪೂಜೆ ಮುಗಿಯುತ್ತಿದ್ದಂತೆಯೇ ಎಡೆಗಾಗಿ ನವಣಕ್ಕಿ ಅನ್ನ ಬೇಳೆಹುಳಿ, ಬದನೇಕಾಯಿಯ ಎಣ್ಣೆಗಾಯಿ, ಹುಣಸೇಕಾಯಿಚಟ್ನಿ, ಜೋಳದ ರೊಟ್ಟಿ,

ಮೊಸರು ಹಾಕಿಕೊಂಡು ಬಂದು ಇತ್ತಳು ಗುರುಗಳು ದೇವರಿಗೆ ನೈವೇದ್ಯ ನೀಡಿ ಪ್ರಸಾದಕ್ಕೆ ಕುಳಿತರು. ಭಕ್ಷ್ಯಭೋಜ್ಯಗಳನ್ನು ಸ್ವೀಕರಿಸುತ್ತಾ—

"ತುಂಬಾ ಸೊಗಸಾಗಿಯೇ ಮಾಡಿದ್ದೀರಮ್ಮಾ ಅಡಿಗೆ" ಎಂದರು.

"ತಮಗೆ ರೊಟ್ಟಿ ಹಿಡಿಸುತ್ತದೆಯೋ, ಇಲ್ಲವೋ....ನಿಮ್ಮದು ರಾಗಿಯ ಸೀಮೆ....ರಾಗಿ ರೊಟ್ಟಿ ಹಿಟ್ಟು ಹೆಚ್ಚಾಗಿ ಮಾಡುತ್ತೀರಿ ಅಂತ ಕಾಣಿಸುತ್ತೆ"

"ಅದು ಇದ್ದೇ ಇರುತ್ತೇ. ಅಮ್ಮಾ......ಇಲ್ಲಿನ ಊಟ ಇಲ್ಲಿಗೆ ಅಲ್ಲಿನ ಊಟ ಅಲ್ಲಿಗೆ. ಇದರ ಸವಿಯನ್ನು ನೋಡೋ ಭಾಗ್ಯ ಬಂತಲ್ಲ ಅಂತ ಸಂತೋಷವಾಗಿದೆಯಮ್ಮ. ನಮ್ಮ ಕಡೆಯೂ ಜೋಳ ಬೆಳೆಯುತ್ತಾರೆ. ನಿಮ್ಮ ಕಡೆಯಷ್ಟಿಲ್ಲ. ಆದ್ರೂ ನಿಮ್ಮಷ್ಟು ಚೆನ್ನಾಗಿ ರೊಟ್ಟಿ ತಟ್ಟ ಲಾರರು. ಅನ್ನ....ಇಷ್ಟೇ ಸಾಕು. ಇನ್ನೊಂದು ಬಿಸಿ ರೊಟ್ಟಿಯನ್ನೇ ನೀಡಿ ಬಿಡ್ಯಮ್ಮಾ"

"ತೆಗೆದುಕೊಳ್ಳಿ... ಇನ್ನೊಂದು ಹಾಕ್ತೇನೆ ಬುದ್ಧಿ."

"ಇಲ್ಲಮ್ಮ......ಒಂದೇ ಸಾಕು. ಸರ್ವಜ್ಞ...ಹೇಳಿಲ್ವೇ ಅಮ್ಮ "ಜೋಳವನು ತಿಂಬವನು ತೋಳನಂತಾಗುವನು" ಎಂದು ಜೋಳ ಅಂತ ನನಗೆ ತಿರಸ್ಕಾರವಿಲ್ಲ.

ಎನ್ನುತ್ತಾ ರೊಟ್ಟಿ ತಿಂದು, ಅನ್ನ ಉಂಡು, ಹಜಾರದಲ್ಲಿ ಒಂದು ಬಟ್ಟೆಯನ್ನು ಬದಲಾಯಿಸಿ, ಬೀಸಣಿಗೆಯಿಂದ ಗಾಳಿಯನ್ನು ಬೀಸಿಕೊಳ್ಳುತ್ತಾ ಕುಳಿತರು. ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡಮೇಲೆ ಗೌರಮ್ಮನನ್ನು ಉದ್ದೇಶಿಸಿ—

"ಏನಮ್ಮಾ...ತಮ್ಮ ಹೆಸರನ್ನೇ ಕೇಳಲಲ್ಲ."

"ಗೌರಮ್ಮ ಅಂತ ಬುದ್ಧಿ"

"ಗೌರಮ್ಮ ನಿಮ್ಮ ಆತಿಥ್ಯದಿಂದ ನನಗೆ ಸಂತೋಷವಾಗಿದೆ. ದೇವರು ನಿಮಗೆ ಒಳ್ಳೆಯದು ಮಾಡಲಿ, ನಾನಿನ್ನು ಬರುತ್ತೇನಮ್ಮ."

"ಬುದ್ಧಿ" ಇಷ್ಟು ಬೇಗ ಹೋಗುವ ಅವಶ್ಯಕತೆಯಾದರೂ ಏನು ? ಇನ್ನು ಕೆಲವು ದಿನಗಳಿದ್ದರೆ ನಿಮ್ಮ ಪಾದ ಸೇವೆಗೈದು ಪುಣ್ಯ ಕಟ್ಟಿಕೊಳ್ಳ ಬೇಕೆಂಬ ಆಸೆ ಇದೆ. ಅದನ್ನು ಪೂರೈಸಿ ಹೋಗಬಹುದಲ್ಲಾ ಬುದ್ಧಿ"

"ನಾನೀಗ ದೇಶ ಸಂಚಾರ ಮಾಡ್ತಾ ಇದ್ದೀನೆ ಗೌರಮ್ಮ ಇಲ್ಲೀ ಹೆಚ್ಚು ದಿನಗಳನ್ನು ಕಳೆದರೆ ಹೇಗೆ?"

"ಗುರು ಸೇವೆಯೇ ನನ್ನ ಗುರಿ ಬುದ್ಧಿ, ತಮ್ಮಂಥ ಗುರುಗಳು ಬರುವುದೇ ಅಪರೂಪ. ಇದು ನನ್ನ ಪೂರ್ವ ಜನ್ಮದ ಪುಣ್ಯವೇ ಸರಿ ಅಂತಹುದುದರಲ್ಲಿ ನೀವು ಇಷ್ಟು ಬೇಗನೆ ಹೋಗುವುದು ನನ್ನ ಮನಸ್ಸಿಗೆ ಬೇಸರವನ್ನು ತರುತ್ತದೆ. ಆದುದರಿಂದ ಮತ್ತೆ ಕೆಲವು ದಿನಗಳಿದ್ದು ಹೋಗಬೇಕೆಂದು ತಮ್ಮಲ್ಲಿ ಅಡ್ಡ ಬಿದ್ದು ಬೇಡಿಕೊಳ್ಳುತ್ತೇನೆ."

ಎಂದು ಸಾಷ್ಟಾಂಗವೆರಗಲು ಸಪ್ಪಣ್ಣಾರ್ಯರು ಆಶೀರ್ವದಿಸುತ್ತಾ—

"ಏ ೦ ಗೌರಮ್ಮ......ನಿನ್ನ ಮನಸ್ಸಿನ ಆಸೆಯನ್ನು ಪೂ ರೈ ಸಿ ಹೋಗುತ್ತೇನೆ"

ಎನ್ನಲು ಗೌರಮ್ಮನ ಮುಖದಲ್ಲಿ ಸಂತೋಷ ಲಾಸ್ಯವಾಡಿತು.

ಗುರುಗಳು ಗೌರಮ್ಮನ ಆಸೆಯಂತೆ ಆಕೆಯ ಮನೆಯಲ್ಲುಳಿದುಕೊಂಡರು. ದಿನಗಳುರುಳಿದವು.

ಯೌವನದ ಪುತ್ಥಳಿಯಂಥ ಸಪ್ಪಣಾರ್ಯ ಸ್ವಾಮಿಗಳು.

ಹರೆಯ ಇನ್ನೂ ಉಳಿದ ವಿಧವೆ ಗೌರಮ್ಮ.

ಅಕ್ಕ ಪಕ್ಕ್ದವರ ಕಣ್ಣು ಕಿವಿಗಳು ಚುರುಕಾದುವು. ಗೌರಮ್ಮನಿಗೆ ಕೇಳುವಂತೆ ಮಾತುಗಳು, ಅದನ್ನು ಕೇಳಿದ ಗೌ ರ ಮ್ಮ ಅವಕ್ಕಾದಳು. ಕಂಗಳಿಂದ ದುಃಖಾಶ್ರುಗಳು ಉದುರಿದುವು.

ಅದಾಗ ತಾನೇ ಗುರುಗಳು ಹೊರಗೆ ಹೋಗಿ ಒಂದು ರಾತ್ರಿ ಮಂಚದ ಮೇಲೆ ಒರಗಿದ್ದರು. ಬಿಕ್ಕಿಬಿಕ್ಕಿ ಅಳುತ್ತಾ ಬರುತ್ತಿದ್ದ ಶಬ್ದ ಕೇಳಿ ಹೊರಬಂದು ನೋಡಿದರು. ಗೌರಮ್ಮ ಅಳುತ್ತಿದ್ದುದನ್ನು ಕಂಡು—

"ಏನಮ್ಮಾ? ಏನಾಯ್ತು?"

"ಬುದ್ಧಿ ಆ ಮಾತುಗಳನ್ನು ಹೇಗೆ ನಿಮ್ಮಲ್ಲಿ ಬಿನ್ನೈಸಿಕೊಳ್ಳಲಿ?"

ಕಣ್ಣೀರೊಂದೇ ಉತ್ತರವಾಗುತ್ತು. ಮತ್ತೆ ಗುರುಗಳು—

"ಗುರುಗಳ ಹತ್ತಿರ ಹೇಳಲಿಕ್ಕೇನು ಸಂಕೋಚ ಗೌರಮ್ಮಾ ಹೇಳಿ ಭಯ ಪಡಬೇಡಿ"

"ಸದ್ಗುರುಗಳೇ, ಮೂಢ ಜನರು ನಮ್ಮಿಬ್ಬರಿಗೆ ಸಂಬಂಧ ಕಲ್ಪಿಸಿ ಏನೇನೋ ಬಾಯಿಗೆ ಬಂದಂತೆ ಮಾತನಾಡಿಕೊಳ್ಳುತ್ತಿದ್ದಾರೆ"

"ಹ್ಞಾಂ...ಗೌರಮ್ಮ...ಪಾಪ ಮಾಡಿದರೆ ತಾನೇ ಚಿಂತೆ. ಮನುಷ್ಯನ ಮೂಳೆ ಇಲ್ಲದ ನಾಲಿಗೆಯನ್ನು ಬೇಕಾದಂತೆ ಹೊರಳಿಸಬಹುದು. ಅದಕ್ಕೆ ಯೋಚಿಸಬೇಡಮ್ಮ ಆ ಪಾಪ ಅವರಿಗೇ ಆಗುತ್ತದೆ."

ಗೌರಮ್ಮ ಒಂದೇ ಸಮನೆ ಅಳಲಾರಂಭಿಸಿದಳು. ಅದನ್ನು ನೋಡಿದ ಗುರುಗಳು—

"ಯಾಕಮ್ಮಾ ಸುಮ್ಮನೇ ಅಳುತ್ತೀಯೆ. ಪಾಪ ಮಾಡದ ನಮಗೇಕೆ ಚಿಂತೆ ಹೇಳು."

"ಬುದ್ಧಿ ನನ್ನಿಂದ ನಿಮಗೊಂದು ಅಪಕೀರ್ತಿ ಬರುವುದಲ್ಲಾ ಎಂಬ ದುಃಖ"

"ನಾನು ಅದನ್ನು ತೃಣಕ್ಕೆ ಸಮ ಮಾಡಿರುವೆ. ನಾವು ನಿರ್ದೋಷಿಗಳು, ನಮಗೆ ಆ ಅನುಮಾನವೇ ಬೇಡ. ಏಳಮ್ಮಾ ನಿನ್ನ ಕೆಲಸದಲ್ಲಿ ನಿರತಳಾಗು" ಎಂದರು.

"ನೀವೇನೋ ಹೇಳ್ತಾ ಇದ್ದೀರಿ, ಆದ್ರೆ ನನಗೆ ಮನಸ್ಸು ತಳಮಳ ಗುಟ್ಟುತ್ತಿದೆ."

"ನಾನು ಇರುವುದಕ್ಕೆ ತಾನೇ ಈ ಅಪಕೀರ್ತಿ ಬಂದುದು; ನಾನು ಹೋಗುತ್ತೇನೆ."

"ನಿಮ್ಮ ಸೇವೆ ಮಾಡಿ ನಾನು ಮಾಡಿರೋ ಕರ್ಮವನ್ನು ಕಳೆದು ಕೊಳ್ಳಬೇಕೆಂದಿದ್ದೆ. ಆದ್ರೆ ಅದನ್ನು ತಪ್ಪಿಸಬೇಕು ಅನ್ನ್ತಾರಲ್ಲ ಈ ಜನಗಳು. ಇವರಿಗೇನು ಧರ್ಮ-ಕರ್ಮನೇ ಇಲ್ವೇ?"

"ಈ ಮಾತುಗಳೆಲ್ಲಾ ಬಂದುದು ನಾನು ನಿಮ್ಮ ಮನೆಗೆ ಬಂದುದರಿಂದ, ನಾನು ಹೋದರೆ ಆಮೇಲೆ ಎಲ್ಲರೂ ಸುಮ್ಮನಾಗುತಾರೆ."

"ಬುದ್ಧೀ...ಅವರಿವರ ಮಾತು ಕೇಳಿಕೊಂಡು ನೀವು ಹೋಗಬೇಕಾಗಿಲ್ಲ. ಅವರಿಗೆ ತಕ್ಕ ಬುದ್ಧಿಯನ್ನು ಕಲಿಸಬೇಕು, ನೀವು ಮಾತ್ರ ಹೋಗಬೇಡಿ, ದೇವರಂಥ ನಿಮ್ಮನ್ನು ಅಂದರೆ ಅವರು ಹುಳಿತುಕೊಂಡು ಸಾಯ್ತಾರೆ."

"ಹಾಗೆಯೇ ಆಗಲಿ ಬಿಡಮ್ಮ ಇನ್ನೂ ಚಿಂತೆಯಾಕೆ. ಹೋಗಿ ಸ್ನಾನ ಮಾಡಿಕೊಂಡು ದೇವರನ್ನಾದ್ರೂ ಪೂಜೆಮಾಡು ಹೋಗು"

"ನೀವು ಮೊದ್ಲು ಸ್ನಾನಮಾಡಿ ಬಂದುಬಿಡಿ ಬುದ್ಧಿ...ಆಮೇಲೆ ನಾನು ಎಲ್ಲವನ್ನು ಅಣಿ ಮಾಡಿಬಿಡುತ್ತೇನೆ"

"ಇಲ್ಲವಮ್ಮಾ ಮೊದಲು ನೀವು ಮಾಡಿಕೊಂಡು ಅಣಿ ಮಾಡಿ ಅಮೇಲೆ ನಾನು ಮಾಡ್ತೇನೆ."

ಎಂದು ಗುರುಗಳು ಆರಾಮ ಕುರ್ಚಿಯ ಮೇಲೆ ನಿಟ್ಟುಸಿರನ್ನು ಬಿಡುತ್ತ ಕುಳಿತರು. ಕೂಡಲೇ ಗೌರಮ್ಮನವರು ಸ್ನಾನ ಮುಗಿಸಿ ಬಂದು ಗುರುಗಳ ಪೂಜೆಗೆ ಅಣಿಮಾಡಿ,

"ಬುದ್ಧೀ....ನೀವು ಸ್ನಾನ ಮಾಡುವಿರಿ ದಯಮಾಡಿಸಿ"

"ಆಗಲಮ್ಮ"

ಎಂದು ಎದ್ದು ಸ್ನಾನದ ಮನೆಗೆ ನಡೆದು, ಸ್ನಾನ ಮುಗಿಸಿ ಶಿವಪೂಜೆಗೆ ಬಂದು ಕುಳಿತರು. ಶಿವಪೂಜೆ ಮಾಡಿ ಮುಗಿಸುತ್ತಿದ್ದಂತೆಯೇ ಗೌರಮ್ಮ ಅಡಿಗೆ ಯನ್ನೂ ಸಿದ್ಧಪಡಿಸಿ ಗುರುಗಳಿಗೆ ಊಟವನ್ನು ನೀಡಿದಳು, ತಾನೂ ಸಹ ಗುರು ಪ್ರಸಾದವನ್ನು ಸ್ವೀಕರಿಸಿದಳು. ಗುರುಗಳು ತಾಂಬೂಲವನ್ನು ಸೇವಿಸುತ್ತಾ ಮಂಚದ ಮೇಲೆ ಕುಳಿತು ಯಾವುದೋ ಓಲೆಗರಿಯ ಕಟ್ಟನ್ನು ಬಿಚ್ಚಿ ಓದಲಾ ರಂಭಿಸಿದರು. ಸ್ವಲ್ಪ ಹೊತ್ತಿನ ಮೇಲೆ ಮುಚ್ಚಿದರು. ಮನಸ್ಸು ನಾನಾ ವಿಧ ವಾಗಿ ಲೆಕ್ಕ ಹಾಕಿತು

ಒಬ್ಬ ವಿಧವೆ ಹೆಣ್ಣು ! ಒಬ್ಬ ಹರೆಯ ತುಂಬಿದ ಸನ್ಯಾಸಿ. ಅವರೆಷ್ಟೇ ನಿಷ್ಠೆಯಾಗಿರಲಿ, ಸಮಾಜದ ಕಣ್ಣಿಗೆ ಕಾಣುವ ದೃಷ್ಟಿಯೇ ಬೇರೆ ಅದು ಜಂಗಮ ತೃಪ್ತಿಯಲ್ಲ. ಆಕೆ ಮಾಡುವುದು ಕಾಮ ತೃಪ್ತಿಗಾಗಿ. ಆತ ಆಕೆಯ ಮನೆಯಲ್ಲಿ ಉಳಿದುಕೊಂಡಿದ್ದಾನೆ ಎಂಬ ಅನುಮಾನ ನೋಡುವವರ ಕಣ್ಣಿಗೆ ಸಹಜ ಎನಿಸುವುದು. ಪಾಪ ಗೌರಮ್ಮನಿಗೆ ಎಂಥ ಗುರುಭಕ್ತಿ ? ನನ್ನ ಸೇವೆ ಮಾಡಿದುದಕ್ಕಾಗಿ ಆಕೆಗೆ ಏಕೆ ಇದೊಂದು ಕಳಂಕ. ಅವರವರ ಪಾಪಕ್ಕೆ ಅವರು ಭಾಗಿಗಳಾಗುತ್ತಾರೆ. ನಾನು ಇಲ್ಲಿದ್ದು ಆಕೆಯ ಮನಸ್ಸನ್ನು ನೋಯಿಸುವುದರಲ್ಲಿ ಅರ್ಥವಿಲ್ಲ. ಮನಸ್ಸು ನಾನಾ ವಿಧವಾಗಿ ಆಲೋಚಿಸಿ, ಇಂದು ಈಗಲೇ ಇಲ್ಲಿಂದ ಹೊರಡುವುದೇ ಸರಿ ಎಂಬ ದೃಢ ನಿರ್ಧಾರಕ್ಕೆ ಬಂದಿತು. ರಾತ್ರಿ ತಿಂಗಳ ಬೆಳಕು

ಹಾಲಿನಂತೆ ಬೆಳಗುತ್ತಿತ್ತು. ಚಂದ್ರನನ್ನು ನೋಡಿದ ಸರ್ಪಭೂಷಣ ಶಿವಯೋಗಿಗಳು "ಆ ಚಂದ್ರನು ಇಷ್ಟು ಬೆಳಕನ್ನು ನೀಡುತ್ತಾ ಸುಂದರನಾಗಿದ್ದರೂ ಆತನಿಗೊಂದು ಕಪ್ಪು ಕಲೆ. ಇದು ಕಳಂಕವಲ್ಲ. ಆತನ ಕಳೆಗೆ ಕಣ್ಣೀ ಸರಾದೀತೆಂಬ ಒಂದು ದೃಷ್ಟಿಯ ಬೊಟ್ಟು. ಹಾಗೆ ನಾನು ಗೌರಮ್ಮನ ಭಾಗದ ಪಾಪವನ್ನು ಕಳೆಯಲು ಬಂದ ಪುಣ್ಯ ಬಿಂಧುವೆಂದೇ ತಿಳಿದುಕೊಂಡಿದ್ದೇನೆ. ಈ ತಿಂಗಳ ಬೆಳಕಿನಲ್ಲಿ ನನ್ನ ಪ್ರಯಾಣ ಮುಂದುವರಿಯಬೇಕು. ಇಂದು ಬಳ್ಳಾರಿಯನ್ನ ನಾನು ಬಿಟ್ಟು ಬೇರೆ ಊರಿನತ್ತ ನಡೆಯುವುದೇ ಸರಿ. ಎಂದು ಮನಸ್ಸು ಮಾಡಿದರು. ಗೌರಮ್ಮ ತನ್ನ ಕೋಣೆಯಲ್ಲಿ ನಿದ್ರಿಸುತ್ತಿದ್ದಳು. ಆಕೆಯನ್ನು ನೋಡಿದರು. ಆಕೆಯ ಮುಖದಲ್ಲಿ ದೈವ ಕಳೆ ಇತ್ತು. ಹೇಳಿ ಹೋಗಲೋ ಬೇಡವೋ ಎಂದು ಮನಸ್ಸು ತೂಗುಯ್ಯಾಲೆಯಾಡಿತು. ಹೇಳಿದರೆ ಬೇಡಿ ಎಂದು ತಡೆದರೂ ತಡೆಯಬಹುದು. ನಾನಿರುವುದರಿಂದ ಆಕೆಗೆ ಜನರಿಂದ ಆಡಿಕೆ ಸಹ ತಪ್ಪುವುದಿಲ್ಲ. ಅದಕ್ಕೋಸ್ಕರ ಹೇಳದೆ ಹಾಗೆ ಹೋಗುವುದೇ ಉತ್ತಮ ಎಂದು ಮೆಲ್ಲನೆ ಮನೆ ಬಾಗಿಲನ್ನು ಸರಿಸಿ ಹಂಪೆಯ ಕಡೆಗೆ ಹೊರಟರು. ರಾತ್ರಿಯೆಲ್ಲಾ ನಡಿಗೆ ಸಾಗಿತು. ಆ ತಿಂಗಳ ಬೆಳಕಿನ ರಾತ್ರಿಯಲ್ಲಿನ ಪ್ರವಾಸ ಬಹಳ ಆಪ್ಯಾಯಮಾನವಾಗಿತ್ತು. ಬೆಳಗಾಗುವವರೆಗೂ ಪ್ರಯಾಣ ನಿಲ್ಲದೆ ನಿರಂತರವಾಗಿ ಸಾಗಿತ್ತು. ಮಬ್ಬು ಕವಿದು ಬೆಳಕು ಹರಿಯಿತು.

‡ ‡ ‡ ‡ ‡

ಚೈತ್ರ ಶುದ್ಧ ಪೌರ್ಣಿಮೆ ! ದವನದ ಹುಣ್ಣಿಮೆ ! ಪಂಪಾ ವಿರೂಪಾಕ್ಷನ ರಥೋತ್ಸವದ ದಿನದಂದು ಹಂಪೆಗೆ ಪ್ರಯಾಣ, ವಿರೂಪಾಕ್ಷನ ನೋಡುವ ತವಕ !

ಶ್ರೀರಾಮನು ಪಂಪಾಪತಿಯ ದರ್ಶನ ಫಲದಿಂದ ಸೀತೆಯನ್ನು ಪಡೆದದ್ದು, ಚೊಕ್ಕನೆಂಬ ರಾಕ್ಷಸನು ದಹವಾಡಿದ ಸ್ಥಾನವೇ ಹಂಪೆ, ಕೃಷ್ಣನು ವಿರೂಪಾಕ್ಷನ ದರ್ಶನದಿಂದ ಶ್ಯಮಂತಕಮಣಿಯನ್ನು ದೊರಕಿಸಿಕೊಂಡದ್ದು, ವಿಜಯ ಧ್ವಜನೆಂಬ ರಾಜನಿಂದ ಕಲಿಯುಗದಲ್ಲಿ ದರ್ಶನ ಪಡದುದು, ವಿದ್ಯಾರಣ್ಯರು ಹೊನ್ನಮಳೆಗರೆದ ನಾಡು, ಹರಿಹರ–ರಾಘವಾಂಕರೇ ಮೊದಲಾದ ಕವಿಗಳು ಕಾವ್ಯ ಸೃಜಿಸಿದ ನಾಡು, ಅಂಥ ನಾಡಿನ ದರ್ಶನವಾಯಿತು.

ಹಂಪೆಯ ವೈಭವವನ್ನು ನೋಡುತ್ತಾ ಬಂದು ತುಂಗಭದ್ರೆಯಲ್ಲಿ ಮಿಂದು ವಿರೂಪಾಕ್ಷನ ದೇವಾಲಯಕ್ಕೆ ಬಂದರು. ಸುಂದರವಾದ ದೇವಾಲಯದಲ್ಲಿ ಪಂಪಾವಿರೂಪಾಕ್ಷನ ದರುಶನವಾದಮೇಲೆ ರಾತ್ರಿ ಅಲ್ಲೇ ಮಲಗುವ ಇಚ್ಛೆಯೂ ಆಯಿತು. ಹತ್ತಿರದ ನದಿಯ ಕಲಕಲರವ ಚಂದ್ರನ ಬೆಳದಿಂಗಳು ಬೆಟ್ಟ ಗುಡ್ಡ ಗಿಡಮರಗಳ ಸುಂದರ ದೃಶ್ಯ. ರಾತ್ರಿಯೆಲ್ಲಾ ನೋಡಿ ಬಂದು ದೇವಾಲಯದಲ್ಲೇ ಮಲಗಿದರು. ಅನೇಕ ಯಾತ್ರಾರ್ಥಿಗಳು ಅಲ್ಲೇ ಮಲಗಿದ್ದರು. ವಿರೂಪಾಕ್ಷನ ರಥೋತ್ಸವಕ್ಕೆ ಅಂದು ರಾತ್ರಿಯೆಲ್ಲಾ ಸಿದ್ಧತೆಗಳು ನಡೆಯುತ್ತಲೇ ಇದ್ದುವು.

ಮರುದಿನ ಎದ್ದು ಜನರೆಲ್ಲಾ ತುಂಗಭದ್ರಾನದಿಯಲ್ಲಿ ಸ್ನಾನ ಮಾಡುತ್ತಿದ್ದಾರೆ. ಜಾತ್ರೆಗೆ ಜನರೆಲ್ಲಾ ಸಿದ್ಧತೆ ಮಾಡುತ್ತಿದ್ದಾರೆ. ರಥೋತ್ಸವವನ್ನು ನೋಡಿಕೊಂಡು ಜನರ ಸಾಲಿನಲ್ಲಿ ನಿಂತು ಸರ್ಪಭೂಷಣರು ಮತ್ತೊಮ್ಮೆ ವಿರೂಪಾಕ್ಷನ ದರ್ಶನವನ್ನು ಮಾಡಿಕೊಂಡು,

ಕಾಣರಲ್ಲಾ ಶಿವನ ಕಾಣರಲ್ಲಾ ।
ಕ್ಷೋಣಿಯ ಸರ್ವಕ್ಷೇತ್ರವ ತಿರುಗಿ ಬೆಂದು ಬೆಂಡಾಗಿ ನರರು ॥ ಪ ॥

ತನುವೆ ಪಂಪಾಕ್ಷೇತ್ರ ತನ್ನ
ಮನವೇ ದೇವಸ್ಥಾನವಲ್ಲಿ ।
ಮನುಷ ಜೀವನೆ ವಿರೂಪಾಕ್ಷೇಶ
ನೆನಿಪ ಸಮ್ಯ ಜ್ಞಾನವ ಮರೆದು ॥ ೧ ॥

ಕಂಗಳ ಮಧ್ಯವೇ ಕಾಶೀ ಸ್ಥಳವು
ಶೃಂಗಾಟಕವೆ ಪಂಚಕ್ರೋಶ ।
ತುಂಗ ಪ್ರಣವವೆ ಶ್ರೀ ವಿಶ್ವೇಶ
ಲಿಂಗವೆಂಬುವೀ ಮರ್ಮವ ಮರೆದು ॥ ೨ ॥

ಶಿರವೆ ಶ್ರೀ ಗಿ ರಿ ಗುರುಸಿದ್ಧೇಶ್ವರ
ನಿರವು ಬ್ರಹ್ಮ ರಂಧ್ರವೆ ಗುಡಿಯು ।
ಮೆರೆವ ಜ್ಯೋತಿ ಪ್ರಭೆಯೆ ಮಲ್ಲೇ
ಶ್ವರನೆಂದೆಂಬುವ ಭಾ ವ ವ ಮರೆದು ॥ ೩ ॥

ಎಂದು ಹಾಡುತ್ತಾ ತಮ್ಮ ಮುಂದಿನ ಪ್ರಯಾಣವನ್ನು ಬೆಳೆಸಿದರು.

‡ ‡ ‡ ‡ ‡

ಮಾದಪ್ಪನೆಂಬ ಶಿಷ್ಯನ ಜೊತೆಯಲ್ಲಿ ಸರ್ಪಭೂಷಣರು ಉರವಕೊಂಡ ಮಠಕ್ಕೆ ಬಂದರು. ಅಲ್ಲಿ ಕರಿಬಸವಸ್ವಾಮಿಗಳು ಮಠದಲ್ಲಿದ್ದರು. ಸಪ್ಪಣ್ಣನವರು ಬರುತ್ತಿದ್ದುದನ್ನು ಗಮನಿಸಿ ಎದ್ದು ಸ್ವಾಗತಿಸಿ ಮಠದೊಳಗೆ ಕರೆದುಕೊಂಡು ಹೋಗಿ—

"ತಾವು ಯಾರು? ಎಲ್ಲಿಂದ ಬಂದಿರಿ ಗುರುಗಳೇ ?" ಎನ್ನಲು

"ನಾವು ಬೆಂಗಳೂರಿನ ತಿಪ್ಪಶೆಟ್ಟರ ಮಠದಿಂದ ಬಂದವರು. ನಮ್ಮ ಹೆಸರು ಸಪ್ಪಣ್ಣಾರ್ಯರು ಅಂತ ದೇಶ ಸಂಚಾರದ ಗುರಿಯೊಂದಿಗೆ ತಮ್ಮ ಮಠಕ್ಕೆ ಭೇಟಿ ಕೊಡುತ್ತಿದ್ದೇವೆ."

"ಬಹಳ ಸಂತೋಷ, ತಮ್ಮಂಥ ಅತಿಥಿಗಳ ಸತ್ಕಾರ ಮಾಡುವುದು ನಮ್ಮ ಧರ್ಮ ಶಿವಪೂಜಾನಂದದಲ್ಲಿ ಕಾಲ ಕಳೆಯೋಣ ಬನ್ನಿ"

ಕರಿಬಸವ ಸ್ವಾಮಿಗಳು ಅತಿಥಿ ಸತ್ಕಾರವನ್ನು ಅಚ್ಚುಕಟ್ಟಾಗಿ ಮಾಡಿ, ಮಂಚದಮೇಲೆ ಕುಳಿತು ಇಬ್ಬರೂ ಮಾತನಾಡುತ್ತಿರಲು ಅಲ್ಲಿಗೆ ಸ್ವಲ್ಪ ಜನರ ಗುಂಪು ಬಂದು—

"ಬುದ್ಧೀ..." ಎಂದು ಅಡ್ಡಬಿದ್ದರು. ಏನೂ ತಿಳಿಯದವರಂತೆ ಇಬ್ಬರೂ ಮಿಟಿ ಮಿಟನೆ ನೋಡಲಾರಂಭಿಸಿದರು. ಜನರು ನಮಸ್ಕರಿಸಿ ಮೇಲೇಳುತ್ತಿರಲು ಕರಿಬಸವ ಸ್ವಾಮಿಗಳು ಅವರನ್ನು ಕುರಿತು—

"ತಾವು ಯಾರು ? ಎ ಲ್ಲಿಂ ದ ಬಂದಿರಿ ? ಏನು ಸಮಾಚಾರ ?" ಎನ್ನಲು ಜನರು—

"ಬುದ್ಧಿ... ಸರ್ಪಭೂಷಣಪ್ಪಾ.... ನಮ್ಮನ್ನು ಕ್ಷಮಿಸಿ" ಎಂದು ದೀನ ದನಿಯಲ್ಲಿ ಉಲಿದರು. ಕೂಡಲೇ ಸರ್ಪಭೂಷಣರು—

"ಏನು ತಪ್ಪು ? ಏನು ? ನೀವ್ಯಾರು ? ಏನು ಬಂದ್ರಿ ?" ಎಂದು ಆಶ್ಚರ್ಯದಿಂದ ಅವರ ಮುಖಗಳನ್ನೇ ನೋಡಲಾರಂಭಿಸಿದರು.

"ಬುದ್ಧಿ, ನಾವು ಬಳ್ಳಾರಿಯವರು, ನಿಮ್ಮನ್ನು ನಾವುಬೈದ ತಪ್ಪಿಗಾಗಿ... ನಿಮ್ಮಮೇಲೆ ಅಪವಾದ ಹೊರಿಸಿದ ತಪ್ಪಿಗಾಗಿ, ನಾವು ಈ ಕಷ್ಟವನ್ನು ಅನುಭವಿಸಬೇಕಾಯ್ತು. ನಿಮ್ಮಮೇಲೆ ಅಪಪ್ರಚಾರ ಮಾಡಿದ ಪ್ರತಿಯೊಬ್ಬರಿಗೂ ವಾಂತಿ ಭೇದಿ ಆಗಿ ಪ್ರಾಣವನ್ನು ಬಿಡುತ್ತಿದ್ದಾರೆ. ದಯವಿಟ್ಟು ನಮ್ಮ ತಪ್ಪನ್ನು ಕ್ಷಮಿಸಿ ನಮ್ಮ ಊರಿನಲ್ಲಿ ಎಲ್ಲರಿಗೂ ಆರೋಗ್ಯ ಕರುಣಿಸಿ ಶಾಂತಿಯುಂಟಾಗುವಂತೆ ಮಾಡಿ"

ಎಂದು ವಿನಯದಿಂದ ಬೇಡಿಕೊಳ್ಳಲು ಮುಗುಳ್ನಗುತ್ತಾ ಕುಳಿತರು.

ಗುರು ಕರಿಬಸವ ಮಹಾಸ್ವಾಮಿಗಳು, ಆಶ್ಚರ್ಯದಿಂದ ಎಲ್ಲವನ್ನು ಕೇಳಿದರು. ದೃಷ್ಟಿ ಸರ್ಪಭೂಷಣರತ್ತ ಬೀರಿತು. ದಿವ್ಯಕಾಂತಿ ಮೊಗದಲ್ಲಿ ಹೊಳೆಯುತ್ತಿತ್ತು. ಮಹಾ ಪವಾಡ ಪುರುಷ ಎಂದು ತಿಳಿದು ಥಟ್ಟನೆ ತಮಗೆ ತಿಳಿಯದಂತೆ ಅವರ ಬಾಯಿಂದ ಮಾತುಗಳು ಹೊರಟವು.

"ಸರ್ಪಣ್ಣಾರ್ಯರೇ, ಜೀವಗಳನ್ನು ಉಳಿಸಿ ಬನ್ನಿ"

"ನಿಮ್ಮ ಪ್ರಭಾವದಿಂದ ಆಗಬೇಕಾಗಿದೆ ಗುರುವೇ ?"

"ಇದೇನು ಸರ್ಪಭೂಷಣರೇ ನೀವು ಹೇಳುತ್ತಿರುವುದು"

"ಹೌದು ಗುರುವೇ ನಾನು ನಿಮ್ಮ ಶಿವಯೋಗ ತಪಃ ಪ್ರಭಾವವನ್ನು ಕೇಳಿ ಇಲ್ಲಿಗೆ ಬಂದೆ, ಇಲ್ಲಿ ನಿಮ್ಮಿಂದ ಅನುಗ್ರಹವನ್ನು ಪಡೆಯಬೇಕೆಂದು ಬಂದಿರುವೆ."

"ಅದಕ್ಕೇನಂತೆ ಅಗತ್ಯವಾಗಿ ನೀವು ಇರಬಹುದು."

"ಸ್ವಲ್ಪ ದಿವಸ ಇಲ್ಲಿ ಇದ್ದು ತಮ್ಮ ಆಶೀರ್ವಾದ ಸ್ವೀಕರಿಸುವೆ"

"ಸರಿ ಹೋಗಿ ಬನ್ನಿ, ಭಕ್ತರ ಬಯಕೆಯನ್ನು ಈಡೇರಿಸಿ ಬನ್ನಿರಿ"

"ಆಗಲಿ ಬುದ್ಧಿ...."

ಎಂದು ನಮಸ್ಕರಿಸಿ ಬಳ್ಳಾರಿಯತ್ತ ಹೊರಡುವರು. ಅಲ್ಲಿ ಎಲ್ಲರಿಗೂ ಆಶೀರ್ವದಿಸಲು ಎಲ್ಲರೂ ಆರೋಗ್ಯವಂತರಾಗುವರು. ಮರುದಿನ ಸರ್ಪಣ್ಣಾರ್ಯರು ಭಕ್ತರ ಮನೆಯಲ್ಲಾ ಔತಣ ಮುಗಿಸಿಕೊಂಡು ಮತ್ತೆ ಉರವಕೊಂಡಕ್ಕೆ ಬಂದರು.

ಗುರು ಕರಿಬಸವಸ್ವಾಮಿಗಳು ಸರ್ಪಭೂಷಣರು ಬಂದುದನ್ನು ಗಮನಿಸಿ,

"ಎಲ್ಲರೂ ಆರೋಗ್ಯವಂತರಾದರೆ ಸರ್ಪಭೂಷಣರೇ ?"

"ತಮ್ಮ ಅನುಗ್ರಹದಿಂದ ಎಲ್ಲರೂ 'ಚೆನ್ನಾಗಾದರು ಬುದ್ಧಿ"

ದಿನಗಳುರುಳಿದುವು ಒಂದು ದಿನ ಕರಿಬಸವ ಮಹಾಸ್ವಾಮಿಗಳು ಸಪ್ಪಣ್ಣನವರನ್ನು ಕುರಿತು,—

"ಈಗ ನೀವು ಈ ಮಠದಲ್ಲಿರುವುದಕ್ಕಿಂತ ಪಕ್ಕದಲ್ಲಿರುವ ಕಲ್ಲು ಬಂಡೆ ಕುಠದ ಗವಿಯಲ್ಲಿ ಇರಬಹುದಲ್ಲಾ?"

"ಏಕೆ ಬುದ್ಧಿ?"

"ನಿಮ್ಮ ಕೋಣೆ ನೋಡಿದೆ. ಪುಸ್ತಕದ ಸಂಗ್ರಹಣೆ ಚೆನ್ನಾಗಿ ಮಾಡಿದ್ದೀರಿ? ಅದಕ್ಕೆ ಒಂದು ಗ್ರಂಥ ಭಂಡಾರವೂ ಆದ ಹಾಗಾಯಿತು ಅಲ್ಲದೇ ತಾವು, ವಚನಗಳನ್ನು ರಚಿಸುತ್ತಿರುವುದೂ, ನನ್ನ ಗಮನಕ್ಕೆ ಬಂತು. ಆ ದುದರಿಂದ ಆ ಗುಹೆಯುನ್ನು ನಿಮಗಾಗಿ ಸಿದ್ಧಪಡಿಸಿರುವೆ. ಅಲ್ಲಿ ನಿಮ್ಮ 'ವಿದ್ಯಾನಿಧಿ' ಯನ್ನು ಕೂಡಿದ ಬಹುದಲ್ಲಾ"

"ಅದಕ್ಕೇನಂತೆ ಬುದ್ಧಿ ಆಗಲೀ. ತಮ್ಮ ಹರಕೆಯಂತೆ ಮತ್ತು ನಾಮ ಕರಣ ಮಾಡಿದಂತೆ ಆ ಗ್ರಂಥಭಂಡಾರಕ್ಕೆ "ವಿದ್ಯಾನಿಧಿ" ಎಂತಲೇ ಹೆಸರಿಡ ಬಹುದು."

"ಅಗತ್ಯವಾಗಿ...."

ಕೆಲವೇ ದಿನಗಳಲ್ಲಿ ಅವರ ಆಸೆಯುನ್ನು ಪೂರೈಸಿದರು.

‡ ‡ ‡ ‡ ‡

ಒಮ್ಮೆ ಸರ್ಪಭೂಷಣರು ತಮ್ಮ ಗವಿಯಲ್ಲಿ ಗ್ರಂಥಾವಲೋಕನದಲ್ಲಿ ತೊಡಗಿದ್ದರು. ದೀಪ ಪ್ರಜ್ವಲಿಸುತ್ತಿತ್ತು. ಅದರ ಬೆಳಕಿನಲ್ಲಿ ಅವರೂ ಸಹ ದಿವ್ಯಕಾಂತಿಯಿಂದ ಕಂಗೊಳಿಸುತ್ತಿದ್ದರು. ಗುರು ಕರಿಬಸವಸ್ವಾಮಿಗಳು ಮೆಲ್ಲನೆ ಬಾಗಿಲು ಸರಿಸಿ ಎಲ್ಲವನ್ನೂ ಗಮನಿಸಿದರು. ಸ್ವಲ್ಪ ಹೊತ್ತಾದಮೇಲೆ ಗುರು ಗಳು ಕೆಮ್ಮಲು ಸರ್ಪಭೂಷಣರು ತಟ್ಟನೆ ಎದ್ದು ನಿಂತು—

"ದಯಮಾಡಿಸಿ ಬುದ್ಧಿ....ಕುಳಿತುಕೊಳ್ಳಿ" ಎಂದು ಆಸನ ತೋರಿಸಿದರು. ಗುರುಗಳು ಅಲ್ಲಿ ಕುಳಿತರು.

"ಏನೋ ಓದುತ್ತಾ ಇದ್ರಿ ಅಂತ ಕಾಣುತ್ತೆ ನಾನು ಬಂದು ತೊಂದರೆ ಮಾಡಿದ ಹಾಗಾಯ್ತು."

"ಹಾಗೇನಿಲ್ಲ, ತಮ್ಮೊಂದಿಗೆ ಚರ್ಚೆ ನಡೆಸುವ ಅವಕಾಶ ಒದಗಿತು ಎನ್ನಬಹುದು."

"ಈಗ ತಮ್ಮಲ್ಲಿ ಚರ್ಚೆ ಮಾಡಲಿಕ್ಕೆ ಬರಲಿಲ್ಲ, ಒಂದು ವಿಷಯ ಹೇಳಲಿಕ್ಕೆ ಬಂದೆ."

"ಏನು ಬುದ್ಧಿ?"

"ಕಾಶಿ ಶ್ರೀಶೈಲಕ್ಕೆ ಹೋಗಬೇಕು ಅಂತ ಯಾಕೋ ನನಗೆ."

"ಅದಕ್ಕೇನಂತೆ ನನಗೂ ಅದೇ ಆಸೆ ಇದೆ. ನಾನು ಬರ್ತೇನೆ ಬುದ್ಧಿ."

"ಅಷ್ಟು ದೂರ ನಡೆದು ಹೋಗಬೇಕಾಗುತ್ತೆ ಶ್ರೀ ಶೈಲಕ್ಕೆ ಹೋಗ ಬೇಕಾದ್ರೆ ಬಹಳ ಕಷ್ಟ, ತುಂಬಾ ಕಾಡು ಮೇಡು, ಭಯಂಕರ ಪ್ರಾಣಿ ಗಳಿವೆ."

"ದೇವರನ್ನು ನೋಡಲಿಕ್ಕೆ ಹೋಗ್ತಾ ಇದ್ದೀವಲ್ಲಾ ನಾವೇ ನೂ ಬೇಟೆಗೆ ಹೋಗ್ತಾ ಇಲ್ವಲ್ಲಾ ಅವೇನು ಮಾಡ್ತವೆ ನಮ್ಮನ್ನ?"

"ಹೌದು ಅದೂ ಒಳ್ಳೆಯ ಉಪಾಯವೇ...."

"ನೀವು ಮುಂದಿನ ವಾರಕ್ಕೆ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಳ್ಳಿ"

"ಆಗಲಿ ಬುದ್ಧಿ."

"ಸರಿ ಏನೋ ಕೆಲಸ ಮಾಡ್ತಿದ್ರಿ ಮಾಡಿ, ನಾನು ಬರ್ತೇನೆ" ಎಂದು ಗುರುಗಳು ನಡೆದರು. ಸರ್ಪಭೂಷಣರು ತಮ್ಮ ಕೆಲಸದಲ್ಲಿ ನಿರತರಾದರು.

‡ ‡ ‡ ‡ ‡

ಉರವಕೊಂಡದ ಜಗದ್ಗುರು ಕರಿಬಸವ ಸ್ವಾಮಿಗಳು, ಸರ್ಪಭೂಷಣರು ಹಲವು ಭಕ್ತರನ್ನೊಡಗೂಡಿ ಶ್ರೀಶೈಲಕ್ಕೆ ಹೊರಟರು. ಪ್ರಯಾಣ ಕಾಲುನಡಿಗೆ ಯಲ್ಲೇ ಸಾಗಿತು. ದಾರಿ ದಾರಿಯಲ್ಲಿ ಸಿಕ್ಕಿದ ಊರುಗಳ ಭಕ್ತರ ಮನೆಯಲ್ಲಿ ಬಿನ್ನಹ ಸ್ವೀಕರಿಸಿಕೊಂಡು ಹತ್ತು ಹದಿನೈದು ದಿನಗಳ ಸತತ ಪ್ರಯತ್ನದಿಂದ ಶ್ರೀ ಶೈಲ ಶಿಖರವನ್ನು ತಲುಪಿದರು. ಬೆಟ್ಟಗಳನ್ನು ಸುತ್ತಿ ಸುತ್ತಿ ಹೊರಡಲಾ ರಂಭಿಸಿದರು. ಸುತ್ತಲೂ ದೊಡ್ಡ ದೊಡ್ಡ ಮರಗಿಡಗಳು, ಹೂವು ಹಣ್ಣಿನ ಗಿಡ ಗಳೇ ಮುಂತಾದುವುಗಳು. ನಾನಾ ಮೃಗಪಕ್ಷಿಗಳನ್ನು ನೋಡುತ್ತಾ ತಿಟ್ಟು ಹಳ್ಳಗಳನ್ನು ಹತ್ತಿ ಇಳಿದು ಬೆಟ್ಟದ ಮಲ್ಲಿಕಾರ್ಜುನನ ದರ್ಶನ ಪಡೆಯಲು ಕಷ್ಟಗಳೊಂದನ್ನೂ ಲೆಕ್ಕಿಸದೆ ಗಿರಿಯನ್ನು ಹತ್ತಲಾರಂಭಿಸಿದರು. ಆಗ ದಾರಿ

ಯಲ್ಲಿ ಫಾಲಲೋಚನ ಸ್ವಾಮಿಗಳೆಂಬವರು ಸಿಕ್ಕಿದರು. ಆಗ ಅವರು ಇಬ್ಬರನ್ನು ಸತ್ಕರಿಸಿ ಎಲ್ಲಾ ಸ್ಥಳಗಳನ್ನೂ ತೋರಿಸುವುದರಲ್ಲಿ ಅಣಿಯಾದರು. ಕಣಿವೆಯಲ್ಲಿ ಹರಿಯುತ್ತಿದ್ದ ಕೃಷ್ಣಾನದಿಯೇ ಇಲ್ಲಿ ಶ್ರೇಷ್ಠ ಪಾತಾಳ ಗಂಗೆಯಾಗಿದೆ ಎಂದೂ, ಅದಕ್ಕೆ ಆ ಹೆಸರು ಬರಲು ಕಾರಣವೇನು ಎಂಬ ಕತೆಯನ್ನು ವಿವರಿಸಿದರು. ಸಿದ್ಧರಾಮನು ಗಿರಿಯಿಂದ ಬೀಳುತ್ತಿದ್ದ ಬೆಟ್ಟ, ಸಿದ್ಧರಾಮನ ಕೊಳ, ಆತ ತಪಸ್ಸು ಮಾಡಿದುದು, ಹೇಮರೆಡ್ಡಿ ಮಲ್ಲಮ್ಮ ದನ ಕಾಯುತ್ತಿದ್ದುದು, ಆಗ ಅತ್ತೆಯ ಹಿಂಸೆಯನ್ನು ತಾಳಲಾರದೆ ದುಃಖಿಸುತ್ತಿದ್ದಾಗ ಕಣ್ಣಿಂದ ಬಿದ್ದ ಹನಿನೀರು ಹರಿಯುವ ದೃಶ್ಯಗಳನ್ನು ತೋರಿದರು. ಭೀಮನ ಕೊಳ, ಅಕ್ಕಮಹಾದೇವಿಯ ಕದಳೀವನ, ಪ್ರಭುದೇವರ ತಪೋಸ್ಥಾನ, ಶ್ರೀಶೈಲ ಮಲ್ಲಿಕಾರ್ಜುನ ಭ್ರಮರಾಂಬೆಯರ ದರ್ಶನವನ್ನು ಪಡೆದು ಪಾತಾಳಗಂಗೆಯಲ್ಲಿ ಮಿಂದು ಪುಣ್ಯ ಪುನೀತರಾದರು. ನಾಲ್ಕಾರು ದಿನಗಳು ಶ್ರೀ ಶೈಲದಲ್ಲಿ ಕಳೆದರು. ಶ್ರೀ ಶೈಲ ಶಿಖರದಲ್ಲಿ ನಿಂತು ದೇವಾಲಯದ ಕಳಶವನ್ನು ಕಂಡರೆ ಮತ್ತೆ ಅವರಿಗೆ ಜನ್ಮವೇ ಇಲ್ಲವಂತೆ ಎಂಬುದನ್ನು ಫಾಲಲೋಚನರು ತಿಳಿಸಿದರು. ಬೆಳಿಗ್ಗೆ-ರಾತ್ರಿ ಸ್ವಾಮಿ ದರ್ಶನ ಮಾಡಿ ನಲಿದಾಡಿದರು. ಅಲ್ಲಿ ನಡೆಯುತ್ತಿದ್ದ ಇಪ್ಪತ್ತನಾಲ್ಕು ಘಂಟೆಗಳ ಭಜನೆ ಅದರಲ್ಲಿ ಮೂವರೂ ಭಾಗವಹಿಸಿ ಶಿವ ಧ್ಯಾನ, ಪೂಜೆಗಳ ಕಾಲ ಕಳೆದರು.

ಅಂದು ರಾತ್ರಿ ತಾಳೆಯೋಲೆಯಮೇಲೆ ಬರೆಯಲಾರಂಭಿಸಿದರು.

ಶ್ರೀ ಗಿರಿಯ ಸುಕ್ಷೇತ್ರಕಿಂದು ।
ಹೋಗಿ ಯಾತ್ರೆಯ ಮಾಡಿಬಂದ ।
ಶ್ರೀಗಿರಿಯು ಶರೀರದೊಳಗುಂಟು। ಓ ಶ್ರೀಗುರು ಸಿದ್ಧ
ಯೋಗಿ ಜನರಿಗೆ ಮರ್ಮವು ಬೇರುಂಟು ॥ ಪ ॥

ಆರು ಬೆಟ್ಟವ ದಾಂಟಿ ನಡೆದು
ಮೂರು ಕೊಳ್ಳದ ಮೂಲ ಕಳೆದು ।
ಏರಿದೆನು ಕೈಲಾಸ ದ್ವಾರವ । ಓ ಶ್ರೀಗುರು ಸಿದ್ಧ
ಸರಿ ಬಡಗಲ ಗುಡಿಯ ಕಂಡೆನು ॥ ೧ ॥

ಏಳು ಸುತ್ತಿನ ಕೋಟೆಯೊಳಗೆ |
ನೀಳದುಪ್ಪರಿಗೆಗಳ ನಡುವೆ ||
ತಾಳ ಮದ್ದಳೆ ಭೇರಿ ಘಂಟೆಗಳು | ಶ್ರೀಗುರು ಸಿದ್ಧ
ವೊಳೆ ವೇಳೆಗೆ ತಾವೆ ನುಡಿದುವು ||೨||

ಒಂಬತ್ತು ಬಾಗಿಲುಗಳದರೊ |
ಳಿಂಬಾದ ಬೀದಿಗಳು ನಾಲ್ಕು ||
ತುಂಬಿ ಸೂಸುವ ಕೊಳಗಳೀಳುಂಟು| ಶ್ರೀಗುರು ಸಿದ್ಧ
ಸ್ತಂಭವೆರಡು ಶಿಖರವೊಂದುಂಟು ||೩||

ಪಾತಾಳ ಗಂಗೆಯೊಳು ಮಿಂದು |
ಓತು ಶಿಖರೇಶ್ವರನಿಗೇರಿ
ಜ್ಯೋತಿರ್ಲಿಂಗರೆ ದೃಷ್ಟಿಯನಿಟ್ಟೆನೋ | ಓ ಶ್ರೀಗುರು ಸಿದ್ಧ
ಜೋತಿರ್ಲಿಂಗವು ಕರದೆ ಕಾಣಿಸಿತು ||೪||

ಬರುವ ಕೋಣಗಳೆಂಟನು ಬಡಿದೆ |
ಹಿರಿಯ ಹುಲಿಗಳನಾರ ತಡೆದೆ |
ಮೊರೆವ ಸರ್ಪನ ಹೊಡೆಯ ಮೆಟ್ಟಿದೆನೊ | ಓ ಶ್ರೀಗುರು ಸಿದ್ಧ
ಚರಿಪ ಕಪಿಯನು ಹಿಡಿದು ಕಟ್ಟಿದೆನೊ ||೫||

ಸಪ್ತನದಿಯ ಸಂಗಮದಾಂಟೆ |
ಗುಪ್ತಕದಳಿಮ ಬನದೊಳು ಸುಳಿದ |
ಲ್ಲಿಪ್ಪ ಗುಹೆಯೊಳಗೊಬ್ಬನೆ ಹೊಕ್ಕೆನೊ | ಓ ಶ್ರೀಗುರು ಸಿದ್ಧ
ಸಪ್ತವರ್ಣ ಲಿಂಗವ ಕಂಡೆನೊ ||೬||

ಇಂದ್ರ ದಿಕ್ಕಿನೊಳಿದ್ದ ಸೂರ್ಯ
ಚಂದ್ರಗುತ್ತದ ಪುರದೊಳು ಮುಳುಗೆ |
ಚೆಂದ ಚೆಂದದ ಬೆಳಗು ತೋರ್ಪುದು | ಓ ಶ್ರೀಗುರು ಸಿದ್ಧ
ನಿಂದು ನೋಡಲು ಬಯಲಿಗೆ ಬಯಲದು ||೭||

ಗಿರಿಯ ಶಿಖರ ಕಗ್ನಿ ಮುಖದೊ
ಳಿರುವ ಅರ್ಕೇಶ್ವರನ ಹಿಂದೆ ।
ಸರಿವುದಮೃತದ ಪಂಚಧಾರೆಯು । ಓ ಶ್ರೀಗುರು ಸಿದ್ಧ
ಅರಿದು ಸೇವಿಸೆ ಮರಣವಿಲ್ಲವು ॥೮॥

ಇಂತು ಶ್ರೀಶೈಲದ ಘನವ
ಭ್ರಾಂತಿಯುಳಿದು ತಿರುಗಿ ನೋಡಿ ।
ಅಂತರಂಗದ ಗುಡಿ ಹೊಕ್ಕನೊ । ಓ ಶ್ರೀಗುರು ಸಿದ
ಶಾಂತಮಲ್ಲನೆ ನೀನೆಯಾಗಿರ್ದೆ ॥೯॥

ಊರಿಗೆ ಹೋಗುವ ದಿನವೂ ಸಹ ಬಂತು. ಕರಿಬಸವ ಸ್ವಾಮಿಗಳು, ಸರ್ಪಭೂಷಣರು ಫಾಲಲೋಚನರನ್ನುದ್ದೇಶಿಸಿ—

"ಫಾಲಲೋಚನರೇ ನಿಜವಾಗಿಯೂ ನೀವು ಶ್ರೀಶೈಲದ ಸಂಪೂರ್ಣ ಪರಿಚಯ ಮಾಡಿಕೊಟ್ಟಿರಿ...ನಾವು ಬರ್ತೇವೆ. ಸಾಧ್ಯವಾದರೆ ನಮ್ಮ ಉರುವಕೊಂಡಕ್ಕೆ ಬನ್ನಿ"

"ನನಗೇನು ಬುದ್ಧಿ ಈಗಲೇ ತಮ್ಮ ಜೊತೆಯಲ್ಲಿ ಬಂದು ಬಿಡುತ್ತೇನೆ"

ಕೂಡಲೇ ಸರ್ಪಭೂಷಣರು—

"ಇಲ್ಲ ಫಾಲಲೋಚನರೇ ನಿಮ್ಮನ್ನು ನಾನು ಬೆಂಗಳೂರಿಗೆ ಹೋದಾಗ ಕರೆಸಿಕೊಳ್ಳುತ್ತೇನೆ. ಆವಾಗ ಬರುವಿರಂತೆ. ಆಗಲೇ ಉರುವಕೊಂಡವನ್ನು ನೋಡಿಕೊಂಡು ಬೆಂಗಳೂರಿಗೆ ಬರುವಿರಂತೆ"

"ಆಗಲೀ ಬುದ್ಧೀ"

ಎಂದು ಮಿಡಿದರು. ಇಬ್ಬರೂ ಪ್ರದಿನಂದಿಸಿ ನಡೆದರು. ಫಾಲಲೋಚನರೂ ಅವರನ್ನೇ ದೃಷ್ಟಿಸುತ್ತಾ ನಿಂತರು. ಇಬ್ಬರೂ ಪರಿಶೆಯ ಜನಗಳು ಭಕ್ತರೊಡನೆ ಸೇರಿ ತಮ್ಮ ಪ್ರಯಾಣವನ್ನು ಕಾಶಿಗೆ ಮುಂದುವರಿಸಿದರು. ಹತ್ತದಿನೈದು ದಿನಗಳ ಪ್ರಯಾಣದಲ್ಲಿ ಸಿಕ್ಕಿದ ಪವಿತ್ರ ಯಾತ್ರಾ ಸ್ಥಳಗಳ ದರ್ಶನವನ್ನು ಮಾಡಿಕೊಂಡು ಕಾಶಿಯನ್ನು ತಲುಪಿ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿ

ಕಾಶೀವಿಶ್ವನಾಥನ ಪೂಜೆಯನ್ನು ಮಾಡಿಕೊಂಡು ಕರಿಬಸವ ಸ್ವಾಮಿಗಳು, ಸರ್ಪಭೂಷಣ ಶಿವಯೋಗಿಗಳು ಮತ್ತೆ ಉರುವಕೊಂಡ ಮಹಾಮಠಕ್ಕೆ ಆಗಮಿಸಿದರು. ಊರ ಭಕ್ತರಿಗೆಲ್ಲಾ ಕಾಶಿ, ಶ್ರೀಶೈಲದ ಪ್ರಸಾದವನ್ನು ಹಂಚಿದರು.

‡ ‡ ‡ ‡ ‡

ಸರ್ಪಭೂಷಣರು ದೇಶಾಟನೆಯನ್ನು ಮಾಡಿ ಸಾಕಷ್ಟು ಅನುಭವವನ್ನು ಪಡೆದರು. ತತ್ತ್ವಗ್ರಂಥಗಳ ರಚನೆಯನ್ನು ಮಾಡಿದರು. ಮನಸ್ಸು ಬೆಂಗಳೂರಿನ ಕಡೆ ಎಳೆಯಿತು. ಗುರುಮಠವು ಸರ್ಪಭೂಷಣಾ, ಬೇಗಬಾ ಎಂದು ಕೈ ಬೀಸಿ ಒಂದು ದಿನ ರಾತ್ರಿಯ ಕನಸಿನಲ್ಲಿ ಕರೆದಂತಾಯಿತು. ಮರುದಿನ ಸರ್ಪಭೂಷಣರು ನೇರವಾಗಿ ಕರಿಬಸವ ಸ್ವಾಮಿಗಳ ಹತ್ತಿರ ಬಂದು ನಿಂತರು. ಏನೋ ವಿಷಯ ಇರಬಹುದೆಂದು

"ಏನು ಸಪ್ಪಣ್ಣಾ ?" ಎಂದರು ಅವರು.

"ನಾನು ಇಂದು ಊರಿಗೆ ಹೋಗಬೇಕೆಂದು ಮನಸ್ಸು ಮಾಡಿರುವೆ ಬುದ್ಧಿ"

"ಏಕೆ ನಿನಗೆ ಇಲ್ಲಿ ಅಂಥ ಬೇಸರವಾಯಿತೇ?".

"ಇಲ್ಲ ಬುದ್ಧಿ ನಾನು ದೇಶಾಟನೆಯನ್ನು ಆರಂಭಿಸಿ ಹನ್ನೆರಡು ವರ್ಷಗಳೇ ಕಳೆದುವು. ನನಗೆ ಗುರುಗಳನ್ನು ನೋಡಬೇಕೆನಿಸುತ್ತದೆ. ಅವರು ಶೀರಾ ಮುದುಕರಾಗಿದ್ದಾರೆ. ಅವರ ಸೇವೆಯನ್ನು ಮಾಡಬೇಕಾಗಿದೆ. ಅದಕ್ಕೋಸ್ಕರ ಹೋಗಬೇಕೆಂಬ ಮನಸ್ಸಾಗಿದೆ"

"ಇದಕ್ಕೆ ನಾನು ಇಲ್ಲ ಎಂದು ಹೇಳಲಾರೆ. ಹೋಗಿ ಬಾ ಸಪ್ಪಣ್ಣ. ನಿನಗೆ ದೇವರು ಸನ್ಮಂಗಳಗಳನ್ನುಂಟು ಮಾಡಲಿ"

"ಆಗಲೀ ಬುದ್ಧೀ"

—ಎಂದು ಗುರುಗಳಿಗೆ ಸಪ್ಪಣ್ಣನು ನಮಸ್ಕರಿಸಿ ಪ್ರಯಾಣವನ್ನು ಬೆಂಗಳೂರಿಗೆ ಬೆಳೆಸಿದನು.

‡ ‡ ‡ ‡ ‡

ಗುರುಸಿದ್ಧ ಸ್ವಾಮಿಗಳು ಮೈಸೂರಿನ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿರುವ ಅರಮನೆಯ ಶ್ರೀ ಪಂಚಗವೀ ಮಠದಲ್ಲಿ ಮಹಾಲಿಂಗ ಸ್ವಾಮಿ

ಗಳವರೊಡನೆ ವಿದ್ಯಾ ಪರಿಣತರಾದವರಾಗಿದ್ದರು. ಈಗ ತುಂಬಾ ಹಣ್ಣು ಹಣ್ಣು ಮುದುಕರಾಗಿದ್ದಾರೆ. ಕ್ರಿ. ಶಕ ೧೮೬೮ನೇ ಇಸವಿಯ ಒಂದು ದಿನ. ಪೂಜೆ ಫಲಹಾರವನ್ನು ಮುಗಿಸಿ ಮಠದ ಹಜಾರದಲ್ಲಿ ಕುಳಿತಿದ್ದಾರೆ. ಸ್ವಲ್ಪ ಹೊತ್ತಾಗುತ್ತಿದ್ದಂತೆಯೇ ಯಾರೋ ಬಂದ ಹಾಗಾಯಿತು ಅಂತು ನೋಡಿದರು. ಆಗತಾನೇ ದೇಶಾಟನೆ ಮುಗಿಸಿದ ಸರ್ಪಭೂಷಣರು ಬರುತ್ತಿದ್ದುದು ಕಂಡಿತು.

ಹತ್ತು ವರ್ಷಗಳಮೇಲೆ ಗುರುಮಠವನ್ನು ತಲುಪಿದರು. ಗುರುಗಳಿಗೆ ಒಂದು ಸಾಷ್ಟಾಂಗವೆರಗಿದರು.

"ಯಾವಾಗ ಬಂದೆಯಪ್ಪಾ ಸರ್ಪಭೂಷಣ ?"

"ಇದೀಗ ತಾನೇ ಬಂದೆ ಬುದ್ಧಿ"

"ಹೇಗಿತ್ತು ದೇಶಾಟನ, ತೀರ್ಥಯಾತ್ರೆ ?"

"ಕಷ್ಟ—ಸುಖ ಎರಡರಿಂದಲೂ ತುಂಬಿತ್ತು, ಪ್ರಪಂಚದ ಅನುಭವವಾಯಿತು, ವಿಷಯಗಳನ್ನು ಕಣ್ಣಾರೆ ಕಂಡು ಕಿವಿಯಾರೆ ಕೇಳಿ, ಪವಿತ್ರ ಸ್ಥಳಗಳ ದರ್ಶನವಾಯ್ತು ಗುರುದೇವಾ."

"ಹೋಗಲಿ...ಯಾವ ಯಾವ ಕ್ಷೇತ್ರಗಳನ್ನು ನೋಡಿದಿರಿ?"

"ಹೆಚ್ಚಿಗೆ ಹೇಳಬೇಕಂದರೆ ಉತ್ತರದ ಎಲ್ಲಾ ಪವಿತ್ರ ಸ್ಥಳಗಳ ವೀಕ್ಷಣೆ ಆಯಿತು, ಕಾಶಿ, ಶ್ರೀಶೈಲ, ಗೋಕರ್ಣ, ಕೂಡಲಸಂಗಮ, ಸೊನ್ನಲಿಗೆ ಮುಂತಾದುವುಗಳು"

—ಎಂದು ಪ್ರತಿಯೊಂದು ಊರಿನಲ್ಲೂ ತಮಗಾದ ಅನುಭವಗಳನ್ನು ವಿವರಿಸಿದರು.

"ಈಗ ತಾನೇ ಪ್ರಯಾಣದಿಂದ ಬಳಲಿ ಬಂದಿದ್ದೀರಿ ಸ್ವಲ್ಪ ಊಟ ವಿಶ್ರಾಂತಿ ಆಗಲಿ ಆಮೇಲೆ ಮಾತಾಡೋಣ"

ಎನ್ನಲು ಹೊರಡುವರು. ಊಟ, ವಿಶ್ರಾಂತಿಯಾದ ಮೇಲೆ ಮತ್ತೆ ಮಾತಗಳು. ಮಾತು ಮುಗಿಸುತ್ತಿದ್ದಂತೆಯೇ—

"ಗುರುಗಳೇ ಸ್ವಲ್ಪ ಮನೆ ಕಡೆ ಹೋಗಿದ್ದು ಬರ್ತೇನೆ ಈ ತೀರ್ಥ, ಪ್ರಸಾದಗಳನ್ನು ಕೊಟ್ಟು ಬರ್ತೇನೆ, ಎಲ್ಲರೂ ಕಾತುರರಾಗಿರಬೇಕು"

ಎನ್ನಲು ಯಾವ ವಿಷಯವನ್ನೂ ಅವರಿಗೆ ಹೇಳದೆ "ಆಗಲಿ ಹೋಗಿ ಬನ್ನಿ" ಎಂದರು.

ಸರ್ಪಭೂಷಣರು ಮನೆಯತ್ತ ನಡೆದರು.

‡ ‡ ‡ ‡ ‡

ಜ್ಞಾಪಕ ಬಂದಾಗಲೆಲ್ಲಾ ಚನ್ನಮ್ಮನವರಿಗೆ ದುಃಖ ಸರ್ಪಭೂಷಣರದೇ. ದೇಶ ಸಂಚಾರ, ತೀರ್ಥಯಾತ್ರೆ ಮುಗಿಸಿ ಯಾವಾಗ ಬರ್ತಾರೆ, ಎಂದು ಕಾದು ಕಾದು ಸಾಕಾಯಿತು. ಎಷ್ಟೋ ದಿನ ಊಟ ಮಾಡುವಾಗ, ತಿಂಡಿ ತಿನ್ನುವಾಗ ಕಣ್ಣೀರು ಸುರಿಸುತ್ತಿದ್ದರು. ಅದನ್ನು ಗಮನಿಸಿದ ಮಕ್ಕಳು, ಗಂಡ "ಯಾಕೆ ಯೋಚನೆ ಮಾಡ್ತಾ ಇದ್ದೀಯೆ ? ದೇವರು ಅವರಿಗೆ ಒಳ್ಳೆಯದನ್ನು ಮಾಡ್ತಾನೆ, ಬೇಗ ಬಂದು ಬಿಡ್ತಾರೆ ಎಂದು ಸಮಾಧಾನವನ್ನು ನೀಡಿದರು. ಆದರೂ ಆಕೆ ಜ್ಞಾಪಕ ಮರುಕಳಿಸಿದಾಗ ಒಳಗೊಳಗೆ ಅಳುತ್ತಿದ್ದಳು. ಅವರು ಬೇಗ ಬರಲಿ ಎಂದು ಶ್ರೀಶೈಲ ಚನ್ನಮಲ್ಲಿಕಾರ್ಜುನನಿಗೆ ತುಪ್ಪದ ದೀಪವನ್ನು ಹಚ್ಚಿ ಕೈ ಮುಗಿಯುತ್ತಿದ್ದರು.

ಅಂದು ಆಗತಾನೇ ಚೆನ್ನಮ್ಮನವರು ತುಪ್ಪದ ದೀಪವನ್ನು ಹಚ್ಚುತ್ತಿರಲು ಸರ್ಪಭೂಷಣರು ಬಂದರು. ಮಲ್ಲಮ್ಮನನ್ನು ಮನೆಯ ಮುಂದೆ ಕಂಡು....

"ಏನಮ್ಮಾ ಮಲ್ಲಮ್ಮ ಅಮ್ಮ ಏನ್ಮಾಡ್ತಿದ್ದಾರೆ ?"

"ಅಮ್ಮಾ....ದೇವರಿಗೆ ತುಪ್ಪದ ದೀಪ ಹಚ್ತಾ ಇದ್ದಾರೆ"

"ಅಮ್ಮಾ...ಸರ್ಪಭೂಷಣ ಬುದ್ಧಿಯವ್ರು ಬಂದರು" ಎಂದು ಹೇಳಲು ಹೊರಟಳು.

"ಯಾವಾಗ ದಯಮಾಡಿಸ್ದ್ರಿ ಬುದ್ಧಿ?" ಎಂದರು ಹುಚ್ಚಣ್ಣನವರು.

"ಈಗ್ತಾನೆ ಬಂದೆ...."

"ನಿಮ್ಮ ಹೆಂಡತಿ ಯಾಕೆ ಅಲ್ಲೇ ನಿಂತಿದ್ದಾರೆ ?"

"ಅವರು ಹೊರಗಾಗಿದ್ದಾರೆ ಬುದ್ಧಿ"

"ಲಿಂಗ ಕಟ್ಟಿದವರಿಗೆ ಹುಟ್ಟು, ಸಾವು, ಮುಟ್ಟುಗಳ ಮೈಲಿಗೆ ಇಲ್ಲಮ್ಮಾ. ಅಂತ ಹೇಳ್ತಾರೆ ದೊಡ್ಡವರು."

ಬಿಡು ಬಾಹ್ಯದೊಳು ಡಂಭವ ಮಾನಸದೊಳ
ಗೆಡಬಿಡದಿರು ಶಂಭುವ ।
ಒಡಲೊಳು ವಂಚಿಸಿ ಹೊರಗೆ ನೀಕೀರ್ತಿಯ
ಪಡೆದರೆ ಶಿವ ನಿನಗೊಲಿವನೆ ಮರುಳೆ ॥ ಪ ॥

ಜನ ಮೆಚ್ಚಿ ನಡೆಕೊಂಡರೇನುಂಟು ಲೋಕದಿ
ಮನ ಮೆಚ್ಚಿ ನಡೆಕೊಂಬುದೆ ಚಂದವು ।
ಜನರೇನು ಬಲ್ಲರು ಒಳಗಾಗೊ ಕೃತ್ಯವ
ಮನವರಿಯದ ಕಳ್ಳತನವಿಲ್ಲವಲ್ಲಾ ॥೧॥

ಜನರು ಮೆಚ್ಚುತ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಹನೇ ।
ಜನರಿಲ್ಲಿ ನಿನ್ನದು ದೊಡ್ಡಾತನೆಂದರೆ
ಚಿನುಮಯ ಶಿವನಲ್ಲಿ ಅರಿಯನ ಮರುಳೆ ॥೨॥

ಮನದೊಳು ಶಿವತಾನು ಮನ ಮಾಡಿಕೊಂಡಿಹ
ಮನ ಮೆಚ್ಚಿ ನಡೆದರೆ ಶಿವ ಮೆಚ್ಚುವ ।
ಮನಕಂಜಿ ನಡೆಯದೆ ಜನಕಂಜಿ ನಡೆದರೆ
ಮನದಾಣ್ಮ ಗುರುಸಿದ್ಧ ಮರೆಯಾಗೊನಲ್ಲ ॥೩॥

"ಮಾತಾಡುತ್ತಿಲು ಮನೆಯವರೆಲ್ಲಾ ಸೇರಿದರು. ಸರ್ಪಭೂಷಣರು ಕುಳಿತಿದ್ದ ಮಂಚದ ಸುತ್ತುಗಟ್ಟಿ ಬೇರೆ ಬೇರೆ ಊರಿನ ದೇವರ ಮಹಾತ್ಮ್ಯೆಗಳನ್ನು ಕೇಳಲಾರಂಭಿಸಿದರು. ಸರ್ಪಭೂಷಣರು ವ್ಯವಧಾನದಿಂದ ಎಲ್ಲರಿಗೂ ತಮ್ಮ ದೇಶ ಸಂಚಾರದ ಸ್ವಾರಸ್ಯಗಳನ್ನು ವಿವರಿಸಿದರು. ಕಂಗೆಟ್ಟು ಕಡ್ಡಿಯಾದ ಚನ್ನಮ್ಮ ವಿಧವೆಯಾವಸ್ಥೆಯಲ್ಲಿ ಕಂಡರು ! ಸಪ್ಪಣ್ಣ ಬುದ್ಧಿಯವರನ್ನು ನೋಡಿದ ಚನ್ನಮ್ಮನವರು ಬಂದರು. ಚೆನ್ನಮ್ಮನವರು ಒಂದೆಡೆ ಸಂತಸ ಹೊಂದಿದರೂ ಕಂಗಳಲ್ಲಿ ನೀರು ಆಡಲಾರಂಭಿಸಿತು. ಕೂಡಲೇ ಮನೆಯಲ್ಲಿನ ಎಲ್ಲರೂ ಬಂದು ತುಂಬಿಕೊಂಡರು. ಹುಚ್ಚಣ್ಣಪ್ಪನವರು ಸ್ವಾಮಿಗಳನ್ನುದ್ದೇಶಿಸಿ.—

"ಬುದ್ಧಿ ನಮ್ಮ ತಂದೆ ಮಲ್ಲಿಕಾರ್ಜುನಪ್ಪನವರು ನಿಮ್ಮ ಕೊರಗಿನಲ್ಲಿಯೇ ತೀರಿಕೊಂಡರು. ಆದರೂ ಕೊನೆಯುವರೆಗೂ ನೀವು ಬರಲಿಲ್ಲ.

"ತೀರ್ಥಯಾತ್ರೆಯಲ್ಲೇ ಇದ್ದೆ. ನಾನಾ ದೇಶಗಳನ್ನು ಸುತ್ತಿದೆ. ಇಷ್ಟೆಲ್ಲಾ ಸುತ್ತಿ ಬರುವುದಕ್ಕೆ ಹನ್ನೆರಡು ಹದಿಮೂರು ವರ್ಷಗಳೇ ಬೇಕಾದುವು." ಎಂದು ಒಂದುಘಳಿಗೆ ಚಿಂತೆಗೊಳಗಾದರು. ನಂತರವೇ ಸ್ವಲ್ಪ ಮರೆತು ಮಾತಾಡಲು ಅನುವಾದರು. ಹುಚ್ಚಣ್ಣ, ಮಲ್ಲಶೆಟ್ಟಪ್ಪ, ಚನ್ನಮಲ್ಲಪ್ಪ, ತಂದೆಯ ಮನೆಗೆ ಬಂದಿದ್ದ ಮಲ್ಲಮ್ಮ ಎಲ್ಲರೂ ಮತ್ತೆ ಮತ್ತೆ ಪ್ರಶ್ನೆಗಳನ್ನು ಹಾಕತೊಡಗಿದರು. ಎಲ್ಲದಕ್ಕೂ ಶಾಂತವಾಗಿ ಉತ್ತರ ಕೊಟ್ಟರು. ರುದ್ರಾಕ್ಷಿ ಸರಗಳು, ಲಿಂಗ, ವಿಭೂತಿ ಎಲ್ಲವನ್ನೂ ಕೊಟ್ಟರು. ಸ್ವಲ್ಪ ಹೊತ್ತಿನಲ್ಲಿ ಸಮಾಧಾನ ಹೊಂದಿದಚನ್ನಮ್ಮನವರು,

"ಬುದ್ಧೀ ನನಗೆ ಕೊನೆಯ ಈ ದಿನಗಳಲ್ಲಿ ಏನಾದರೂ ಹೇಳುವುದಿದೆಯೇ ?" ಎನ್ನಲು

"ಅಮ್ಮಾ, ಈ ದಿನಗಳಲ್ಲಿ ಶಿವನನ್ನು ನೆನೆಯುವುದೆಂದೇ ಒಳ್ಳೆಯ ಕೆಲಸ ಶಿವನ ಪೂಜೆ ಮಾಡುವುದು, ಮಾಡುವವರಿಗೆ ಪುಷ್ಪ, ಪತ್ರಗಳನ್ನು ತಂದು ಸಹಾಯ ಮಾಡುತ್ತಾ ಬಂದರೆ ಒಳ್ಳೆಯದಾಗುತ್ತದೆ"

"ಆಗಲಿ ಅಪ್ಪಾ ಈಗ"

"ನಾನು ಮಠಕ್ಕೆ ಹೋಗುತ್ತೇನಮ್ಮ. ವಾರಕ್ಕೊಮ್ಮೆ ಬಂದು ಲಿಂಗಾರ್ಚನೆ ಮಾಡುತ್ತೇನೆ ನಿಮ್ಮ ಮನೆಯಲ್ಲಿ"

"ಆಗಲಪ್ಪಾ" ಎಂದು ಸಂತಸಗೊಂಡರು.

ಅಂದು ಸೋಮವಾರದ ದಿನ ಲಿಂಗಾರ್ಚನೆ ಮಾಡಿದರು. ಅನೇಕ ಜನರು ಸರ್ಪಭೂಷಣರ ಹತ್ತಿರ ಬಂದು ತತ್ತ್ವ ಬೋಧನೆಯನ್ನು ಪಡೆಯಲಾರಂಭಿಸಿದರು.

‡ ‡ ‡ ‡ ‡

ಸರ್ಪಭೂಷಣರು ತೀರ್ಥಯಾತ್ರೆಗಳನ್ನೆಲ್ಲಾ ಮುಗಿಸಿ ಚಿಕ್ಕ ಬಾಣಾವರಕ್ಕೆ ಬಂದು ಐದಾರು ದಿನಗಳು ಭಕ್ತರ ಮನೆಯಲ್ಲಿ ಅವರ ಕೋರಿಕೆಯ ಮೇರೆಗೆ ಇದ್ದರು. ಒಂದು ದಿನ ಹೊರಗಡೆ ತಿರುಗಾಟಕ್ಕೆ ಹೋಗುತ್ತಿದ್ದಾಗ ಊರ ಹತ್ತಿರದ ಬೆಟ್ಟಕ್ಕೆ ಅನೇಕ ಜನರು ಹೋಗುವವರು, ಬರುವವರನ್ನು

ನೋಡಿದ ಸರ್ಪಭೂಷಣರು ಅವರ ಜೊತೆಯಲ್ಲಿ ಬಂದಿದ್ದ ಭಕ್ತನನ್ನು ಪ್ರಶ್ನಿಸಿದರು.

"ಏನು ಇಷ್ಟೊಂದು ಜನ ಬೆಟ್ಟದ ಕಡೆ ಹೋಗ್ತಾ ಇದ್ದಾರಲ್ಲಾ ?" ಅಲ್ಲಿ ಏನು ವಿಶೇಷ ?

" ಈ ಬೆಟ್ಟದಲ್ಲಿ ಸಿದ್ಧಮಲ್ಲಪ್ಪ ಎಂಬ ಶರಣರು ಇದ್ದಾರೆ. ಅವರು ಮಹಾಮಹಿಮರು. ಅವರ ದರ್ಶನ ಆಶೀರ್ವಾದಕ್ಕಾಗಿ ಜನರು ದಿನವೂ ಹೋಗಿ ಬರುತ್ತಾರೆ. "

"ಹಾಗಾದರೆ ಈಹೊತ್ತು ನಾವು ಹೋಗಿ ನೋಡಿಕೊಂಡು ಬರೋಣವೇ?

"ಅದಕ್ಕೇನಂತೆ ಅಗತ್ಯವಾಗಿ... ಹೋಗೋಣ ಬುದ್ಧಿ " ಎಂದ. ಆತನ ಪಯಣ ಬೆಟ್ಟದವರೆಗೆ ಮುಂದುವರಿಯಿತು. ಅವರು ಗವಿಯನ್ನು ತಲುಪಿದರು. ಅಲ್ಲಿ ಶರಣ ಸಿದ್ಧಮಲ್ಲಪ್ಪನವರು ಕುಳಿತಿದ್ದಾರೆ. ಭಕ್ತರು ಹಣ್ಣು-ತಾಂಬೂಲ ಇಟ್ಟು ನಮಸ್ಕರಿಸುತ್ತಿದ್ದಾರೆ. ಗುರುಗಳು ಆಶೀರ್ವದಿಸುತ್ತಿದ್ದಾರೆ. ಎಲ್ಲರ ಸರದಿಯೂ ಮುಗಿದಮೇಲೆ ಗುರುಗಳ ದೃಷ್ಟಿಯು ಸರ್ಪಭೂಷಣರ ಮೇಲೆ ಬಿತ್ತು.

"ಕುಳಿತುಕೊಳ್ಳಿ " ಎಂದು ಗಂಭೀರ ಧ್ವನಿಯಲ್ಲೇ ನುಡಿದರು. ಭಕ್ತನು ಒಂದೆಡೆ, ಸರ್ಪಭೂಷಣರು ಮತ್ತೊಂದೆಡೆ ತಲೆ ಕುಣಿಸುತ್ತಾ ಕುಳಿತರು. ಪ್ರಶ್ನೆಗಳು ಆರಂಭವಾದುವು. ಇದ್ದಕ್ಕಿದ್ದಂತೆಯೇ ದೃಷ್ಟಿ ಗುರುಸಿದ್ಧಮಲ್ಲಪ್ಪನವರ ಎದೆಯ ಮೇಲೆ ಬಿತ್ತು, ಮತ್ತೆ ಚೆನ್ನಾಗಿ ದೃಷ್ಟಿಸಿದರು. ಕೊರಳಿನಲ್ಲಿ ಕರಡಿಗೆಯಾಗಲೀ, ಬಟ್ಟೆಯಲ್ಲಿ ಕಟ್ಟಿದ ಇಷ್ಟಲಿಂಗವಾಗಲೀ ಇರಲಿಲ್ಲ, ಮತ್ತೆ ಸರ್ಪಭೂಷಣರು—

"ತಮ್ಮನ್ನು ನೋಡಿದುದು ಬಹಳ ಸಂತೋಷವಾಯಿತು. ಆದರೆ ಅಷ್ಟೇ ದುಃಖವೂ ಆಗ್ತಾ ಇದೆ ನನ್ನ ಮನಸ್ಸಿಗೆ " ಎಂದರು ಥಟ್ಟನೆ. ಆ ಮಾತನ್ನು ಕೇಳಿ ಆಶ್ಚರ್ಯ ಹೊಂದಿದ ಸಿದ್ಧಮಲ್ಲಪ್ಪನವರು —

"ಕಾರಣ ?"

"ತಮ್ಮ ಪ್ರಸಿದ್ಧಿ ತಿಳಿದು ಸಂತೋಷದಿಂದ ನೋಡಬೇಕೆಂಬ ಆಸೆಯಿಂದ ಬಂದೆ. ಆದರೆ ಈಗ ನಿಮ್ಮನ್ನು ನೋಡಿದ ಮೇಲೆ ಆಸೆ ನಿರಾಸೆ, ದುಃಖವನ್ನು ತಂದೊದಗಿಸಿತು "

"ಏಕೆ ಅಂತ ಹೇಳಬಾರದೆ ?"

"ತಮ್ಮ ಎದೆಯ ಮೇಲೆ ಇಷ್ಟಲಿಂಗವಿಲ್ಲ ?"

"ಈಗ ಅದರ ಅವಶ್ಯಕತೆಯಿಲ್ಲ." ಎಂದು ನಗಲಾರಂಭಿಸಿದರು.

"ಏಕೆ ?"

"ಭಕ್ತಾದಿ ಸ್ಥಳಗಳನ್ನು ಮೀರಿರುವೆನಾದ್ದರಿಂದ ಅದು ಅವಶ್ಯವಿಲ್ಲ ಎನಿಸಿ ಹಾಕಿಕೊಂಡಿಲ್ಲ."

"ಇದೇನು ನೀವು ಹೇಳುತ್ತಿರುವುದು. ಎದೆಯ ಮೇಲೆ ಲಿಂಗವಿಲ್ಲದೆ ಇರುವುದು ಎಂದರೆ ಆತನು ಶಿವಶರಣನೇ ? ದೇಹದ ಮೇಲೆ ಲಿಂಗವಿಲ್ಲದೆ ಯಾವ ಕೆಲಸ ಮಾಡಿದರೂ ಅದು ದೇವರಿಗೆ ತೃಪ್ತಿಯಾಗುವುದಿಲ್ಲ ಎಂಬುದನ್ನೂ ಶಿವ ಶರಣರ ಕತೆಗಳಿಂದಲಾದರೂ ನೀವು ಅರಿತಿಲ್ಲವೇ ? ಇದು ದೇಹಕ್ಕೆ ಮಹಾ ಭಾರವೇ ? "ಶರಣಸತಿ ಲಿಂಗಪತಿ" ಎಂಬುದನ್ನು ತಿಳಿದಿಲ್ಲವೇ ? ಇದು ಮಹಾ ಪಾಪದ ಕೆಲಸವಲ್ಲದೆ ಮತ್ತೇನು ? ಹಾಗೆ ಮಾಡಿದರೆ ಮತ್ತೆ ಮನುಷ್ಯ ಜನ್ಮ ಹೊತ್ತು ಬರಬೇಕು ಅಂತಲೂ ಹೇಳುತ್ತಾರೆ ಆದುದರಿಂದ ನಾನು ಭವಿಯ ಸಂಗಡ ಮಾತಾಡಿದುದು, ನೋಡಿದುದೇ ತಪ್ಪು ಹೋಗುತ್ತೇನೆ..." ಎಂದು ಮೇಲೆದ್ದು ಹೊರಡಲನುವಾಗಲು,

"ಇಲ್ಲಿ—ಸ್ವಲ್ಪ ನಿಲ್ಲಿ...ಯಾಕೆ ಹೋಗ್ತಾ ಇದ್ದೀರಿ ?"

"ನೀವು ಆ ಕಾರ್ಯ ಮೊದಲು ಮಾಡಿ. ನಂತರ ಮಾತಾಡುವೆ"

"ಆಗಲೀ ಬನ್ನಿ ಸರ್ಪಭೂಷಣರೇ" ಎಂದು ದೇವರ ಮುಂದೆ ಇಟ್ಟಿದ್ದ ಲಿಂಗವನ್ನು ಕೊರಳಿಗೆ ಧರಿಸಿಕೊಂಡು ಬರಲು ಮಾತಾಡಿದರು. ಅನೇಕ ವಿಷಯ ಗಳ ಮೇಲೆ ಚರ್ಚೆ ನಡೆಸಿದರು. ಕೊನೆಗೆ ಸರ್ಪಭೂಷಣರು ಹೋಗುತ್ತಿರಲು "ನಿಮ್ಮಿಂದ ನನಗೆ ಪುಣ್ಯಮಾರ್ಗವನ್ನು ಕಂಡಂತಾಯಿತು." ಎಂದು ವಂದಿಸಿ ದರು. ಸ್ವಲ್ಪ ಹೊತ್ತಾದ ಮೇಲೆ ಸರ್ಪಭೂಷಣರು ಚಿಕ್ಕ ಬಾಣಾವರದತ್ತ ನಡೆದರು.

‡ ‡ ‡ ‡ ‡

ಮರುದಿನ ಚಿಕ್ಕಬಾಣಾವರದಿಂದ ಬೆಂಗಳೂರಿನ ಮಠಕ್ಕೆ ಬಂದರು. ದಿನ ಗಳು ಕಳೆದಂತೆ ತಿಪ್ಪಶೆಟ್ಟರ ಮಠದಲ್ಲಿ ಸಪ್ಪಣ್ಣನವರ ಅಧ್ಯಯನ ಸತತವಾಗಿ ನಡೆಯಲಾರಂಭಿಸಿತು. ಹರೆಯ ದಾಟಿದ ಸಪ್ಪಣ್ಣನ ಮನದಲ್ಲಿ ಗುರುವನ್ನು

ಎಷ್ಟು ವಂದಿಸಿದರೂ ಸಾಲದೆ, ತಾಳೆಯೋಲೆಯೊಂದರಲ್ಲಿ ಬರೆದಿಡಲು ಅನು
ಅನುವಾದರು.

“ಸುಕೃತದ ಸರಣಿಗೆನ್ನ ತಿರುಗಿಸಿದ ವಿರತಿ ಸಂಪದವ ಕರುಣಿಸಿದ ಸದು
ಗತಿಯುಪೇಕ್ಷೆಯ ಎನ್ನ ಮನದಿ ಬೆಳೆಯಿಸಿದ ಸಹಜಾನುಭವದಿರುವ ನೊದಗಿಸಿದ
ಜೀವೇಶರೈಕ್ಯದನುವನು ತೋರಿ ಸಂಸ್ಕೃತಿಯ ಧಾವತಿಯ ಕಳೆದು ಘನಮುಕ್ತಿ
ಯೆಂದೆಂಬ ಭಾವೆಯರೊಡವೆರಿಸಿ ನಿಜ ಸುಖವಿತ್ತು ಗುರು ಸಿದ್ಧದೇವನೆನಿಸುವ
ನಿರಾಧಾರಿ ಗುರುತಿಲಕ.”

ಈ ಭಾವನೆ ಅಚ್ಚಾದುದು ಅಂದು ಶಿವಪೂಜೆ ಮುಗಿದು ಮಠದ ತಮ್ಮ
ಕೋಣೆಯಲ್ಲಿ ಕುಳಿತಿದ್ದಾಗ. ಇದನ್ನು ಬರೆದು ಮುಗಿಸುತ್ತಿದ್ದಂತೆಯೇ ಮಠದ
ಅಡಿಗೆಯವನು ಊಟಕ್ಕೆ ಆಹ್ವಾನ ನೀಡಿದ. ಆ ಕಡೆಗೆ ಸರ್ಪಭೂಷಣರು ತೆರಳಿ
ದರು. ಗುರುಗಳು ಆಗ ತಾನೇ ಪೂಜೆ ಊಟ ಮುಗಿಸಿಕೊಂಡು ಬಂದು ಮಠದ
ಹಜಾರದಲ್ಲಿ ತಮ್ಮ ಪೀಠದಲ್ಲಿ ಕುಳಿತುಕೊಂಡರು. ಸ್ವಲ್ಪ ಹೊತ್ತಿನಲ್ಲಿಯೇ
ಗುರುಸಿದ್ಧ ಸ್ವಾಮಿಗಳು ಯಾವುದೋ ಹೊತ್ತಿಗೆಯನ್ನು ನೋಡುವ ಜ್ಞಾಪಕ
ವಾಗಿ ಸರ್ಪಭೂಷಣರ ಕೋಣೆಗೆ ತೆರಳಿದರು. ಮಂಚದಮೇಲೆ ಬರೆದಿಟ್ಟ ತಾಳೆ
ಯೋಲೆ ಕಣ್ಣಿಗೆ ಬಿತ್ತು. ಅದನ್ನು ತೆಗೆದುಕೊಂಡು ನೋಡಿದರು. ಪೂರ್ತಿ
ಓದಿದ ಮೇಲೆ ಮನದಲ್ಲಿ ಬಹಳ ಸಂತೋಷವಾಯಿತು. “ಎಂಥ ಗುರುಭಕ್ತಿ
ಯಿದೆ. ನಿಜವಾಗಿ ಸರ್ಪಭೂಷಣರೇ ಈ ಮಠಕ್ಕೆ ಯೋಗ್ಯನಾದವರು”
ಎಂದು ತಮ್ಮಲ್ಲೇ ಅಂದುಕೊಂಡು ತಮಗೆ ಬೇಕಾದ ಹೊತ್ತಿಗೆಯನ್ನು ಆರಿಸಿ
ಕೊಂಡು ಬಂದು ಓದುತ್ತಾ ಕುಳಿತರು. ಸರ್ಪಭೂಷಣರು ಪ್ರಸಾದ ಸ್ವೀಕರಿಸಿದ
ಮೇಲೆ ತಮ್ಮ ಕೋಣೆಗೆ ಬರುತ್ತಿರಲು ಗುರುಸಿದ್ಧ ಸ್ವಾಮಿಗಳು ಬಸವಣ್ಣನವರ
ವಚನವನ್ನು ಓದುತ್ತಿದ್ದರು. ಸರ್ಪಭೂಷಣರು ಹೋಗುತ್ತಿದ್ದುದನ್ನು ನೋಡಿ—

“ಬನ್ನಿ ಸರ್ಪಭೂಷಣರೇ”

ಎನ್ನಲು ಪಕ್ಕದಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತರು. ಒಂದು
ನಿಮಿಷ ಹೊತ್ತಿಗೆಯನ್ನು ಮುಚ್ಚಿ ಕುಳಿತರು ಗಂಭೀರವಾಗಿ. ಗುರುಗಳನುದ್ದೇ
ಶಿಸಿ ಸರ್ಪಭೂಷಣರೇ ಮಾತನಾಡಲಾರಂಭಿಸಿದರು—

“ಏನು ಗುರುಗಳೇ?”

"ಸರ್ಪಭೂಷಣರೇ ಈ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡ ಸಂಸ್ಕೃತ, ವೇದಾಂತ, ಸಿದ್ಧಾಂತ, ಮುಂತಾದುವುಗಳನ್ನೆಲ್ಲಾ ಓದಿದಿರಿ. ದೇಶಾಟನೆ ಮಾಡಿದಿರಿ. ಕವಿತ್ವ ಮಾಡುವುದರಲ್ಲಿಯೂ ಸಹ ಮುಂದಾಗಿದ್ದೀರಿ. "ಕೈವಲ್ಯ ಕಲ್ಪವಲ್ಲರಿ" "ವೇದಾಂತ ಶಿಖಾರತ್ನ" ವನ್ನು ಬರೆದಿದ್ದೀರಿ ಎಂಬುದನ್ನು ತಿಳಿದು ಬಹಳ ಸಂತೋಷವಾಯಿತು."

"ನಿಮ್ಮಂಥ ದೊಡ್ಡವರ ಮುಂದೆ ನಾವ್ಯಾವ ಬರಹಗಾರರು ಬುದ್ಧಿ ? ನಿಮ್ಮ ಪಾಂಡಿತ್ಯದ ಮುಂದೆ ನಮ್ಮದಾವುದು ? ಆದರೂ ಅವೆಲ್ಲ ನಿಮ್ಮ ಅನುಗ್ರಹದ ಫಲವೇ."

"ಅಷ್ಟೆಲ್ಲಾ ಶಕ್ತಿಯಿರುವುದರಿಂದಲೇ ಈಗ ನಿಮ್ಮಲ್ಲಿ ಒಂದು ವಿಷಯ ಹೇಳಬೇಕು ಅಂತ ಇದ್ದೀನಿ."

"ಅದೇನು ಬುದ್ಧಿ ?"

"ಮಠದ ಮುಂದಿನ ವ್ಯವಹಾರ ನಿಮ್ಮದೇ ಅದಕ್ಕೋಸ್ಕರ ನಿಮಗೆ ಪಟ್ಟಾಧಿಕಾರವನ್ನು ವಹಿಸಿ ನಾನು ನನ್ನೂರಿಗೆ ತೆರಳಬೇಕಾಗಿದೆ"

ಗುರುಗಳ ಮಾತಿಗೆ ಎದುರು ಏನು ಹೇಳಬೇಕು ಎಂಬುದು ತಿಳಿಯದೇ ಹಾಗೇ "ನೋಡೋಣ" ಎಂದ. ಗುರುಗಳಿಗೆ ಶಿಷ್ಯನಿಗೆ ಸಮ್ಮತಿ ಇರಬಹುದೆಂ. ವ್ಯಕ್ತವಾಯಿತು. ಮರು ಮಾತಾಡದೆ ಮಲಗಲು ತಮ್ಮ ಕೋಣೆಯ ಕಡೆ ನಡೆದರು. ಸರ್ಪಭೂಷಣರು ತಮ್ಮ ಕೋಣೆಗೆ ಹೊರಟರು.

ಗುರುಸಿದ್ಧ ಸ್ವಾಮಿಗಳು ಇದಾದ ಒಂದು ವಾರದಲ್ಲಿ ಪ್ರಭುದೇವರ ವಚನವನ್ನು ಓದುತ್ತಿದ್ದಂತೆಯೇ ಇಹವನ್ನು ತ್ಯಜಿಸಿದರು. ಗುರುಗಳ ಉತ್ತರ ಕ್ರಿಯಾದಿಗಳನ್ನೂ ಭಕ್ತರೊಡನೆ ಸೇರಿಕೊಂಡು ಸರ್ಪಭೂಷಣರು ಮಾಡಿ ಮುಗಿಸಿದರು. ನಂತರ ಗುರುಗಳ ಆಜ್ಞೆ ಮತ್ತು ಭಕ್ತಾದಿಗಳ ಆಸೆಯಿದ್ದರೂ ಮಠದ ಅಧಿಕಾರವನ್ನು ವಹಿಸಿಕೊಳ್ಳಲಿಲ್ಲ. ಅವರಿಗೆ ಆ ಅಧಿಕಾರವನ್ನು ವಹಿಸಿಕೊಳ್ಳುವ ಅಭಿಲಾಷೆ ಇರಲಿಲ್ಲ. ಅವರ ದೃಷ್ಟಿ ಸಾಹಿತ್ಯದ ಕಡೆಗೆ, ಓದುವುದು, ಬರೆಯುವುದು, ಶಿವಪೂಜೆ ಮಾಡುವುದರಲ್ಲೇ ನಿರತವಾಗುತ್ತಿದ್ದರು. ಭಕ್ತಾದಿಗಳ ಮನೆಗೂ ನಂತರ ಹೋಗುವುದನ್ನು ಬಹಳ ಕಡಿಮೆ ಮಾಡಿದರು. ತಾವಾಯಿತು, ಸಾಹಿತ್ಯಾಭ್ಯಾಸ, ಸಾಹಿತ್ಯ ಸೃಷ್ಟಿಸುವುದರಲ್ಲೇ ಕಾಲ ಕಳೆಯಲು

ರಂಭಿಸಿದರು. ಅಟ್ಟದ ಮೇಲೆ ಏಕಾಂತದಲ್ಲಿ ಕುಳಿತು ಸಾಹಿತ್ಯ ಲೋಕದಲ್ಲಿ ತುಳುಗುತ್ತಿದ್ದರು.

ಅವರ ಮನಸ್ಸು ಮಠದಲ್ಲೇ ಇದ್ದ ಚಿಕ್ಕ ಗುರುಸಿದ್ಧ ಸ್ವಾಮಿಗಳ ಮೇಲೆ ಬಿತ್ತು. ಅವರೂ ಸಹ ಸರ್ವ ವಿಧದಲ್ಲೂ ವಿದ್ಯಾ ಪಾರಂಗತರೂ, ಗುರುಪೀಠದಲ್ಲಿ ಭಕ್ತಿವುಳ್ಳವರೂ ಆಗಿದ್ದರು. ಆದುದರಿಂದ ಒಮ್ಮೆ ಅವರನ್ನು ಕರೆದು—

"ನಾನು ಸಾಹಿತ್ಯಾಭ್ಯಾಸ ರಚನೆಯಲ್ಲಿ ತೊಡಗಬೇಕೆಂದಿರುವೆ. ಅದಕ್ಕಾಗಿ ತಮಗೆ ಪಟ್ಟಾಧಿಕಾರವನ್ನು ವಹಿಸಿ ಕೊಡಬೇಕೆಂಬ ಆಸೆ" ಎನ್ನಲು ಅವರು ಸ್ವಲ್ಪ ಹೊತ್ತು ಯೋಚಿಸಿ ಸಮ್ಮತಿ ಸೂಚಿಸಿದರು. ಮಠದ ವ್ಯವಹಾರ ದಾಸೋಹ, ಪೂಜೆ, ಪುರಸ್ಕಾರ ಎಲ್ಲವನ್ನೂ ನೋಡಿಕೊಳ್ಳಲಾರಂಭಿಸಿದರು. ಜನರಿಂದ ಹೆಸರನ್ನೂ ಗಳಿಸಿದರು. ಇದರಿಂದ ಸರ್ಪಭೂಷಣರಿಗೆ ತಮ್ಮ ಮನಸ್ಸಿನ ಆನಂದಕ್ಕೆ ಸಹಾಯವಾಯಿತು. ದಿನಗಳುರುಳಿದವು. ಕೀರ್ತಿ ಎಲ್ಲೆಲ್ಲೂ ಬೆಳೆಯಿತು. ವೇದಾಂತ ತತ್ತ್ವ ವಿಚಾರಗಳಲ್ಲಿ ಅದ್ಭುತ ವಿದ್ವತ್ತು ಜನರಿಗೆ ದಿನೇ ದಿನೇ ತಿಳಿಯಲಾರಂಭಿಸಿತು. ಎಲ್ಲೆಡೆಯಲ್ಲೂ ಇವರ ಪ್ರಸಿದ್ಧಿ ಹರಡಿತು.

‡ ‡ ‡ ‡ ‡

ಸರ್ಪಭೂಷಣರು ಪ್ರವಚನದಲ್ಲಿ ಭಾಗವಹಿಸಿದ್ದರು. ಆಗ ಅವರ ದೃಷ್ಟಿಗೆ ಎಂದೋ ನೋಡಿದ ಒಂದು ವ್ಯಕ್ತಿ ಆಸನಾರೂಢವಾಗಿತ್ತು. ಯೋಚಿಸಿದರೂ ಕಲ್ಪನೆಗೆ ಸಿಗಲಿಲ್ಲ. ಪ್ರವಚನ ಮುಗಿದ ಮೇಲೆ ಎಲ್ಲರೂ ಮನೆಗೆ ತೆರಳಿದರು. ಆ ವ್ಯಕ್ತಿ ಗುರುಗಳಿಗೆ ವಂದಿಸಿ ನಿಲ್ಲಲು, ಆ ವ್ಯಕ್ತಿಯೇ ಮಾತನಾಡಲಾರಂಭಿಸಿತು.

"ನಾನು ಪಾಲಲೋಚನ....ಶ್ರೀ ಶೈಲದಿಂದ ಬಂದೆ"

"ಓಹೋ...ನನಗೆ ಮರೆತೇ ಹೋಗಿತ್ತು. ನಾನು ಹಾಗೂ ಶ್ರೀ ಶೈಲಕ್ಕೆ ಹೋಗುವವರ ಕೈಯಲ್ಲಿ ಹೇಳಿ ಕಳುಹಿಸಬೇಕೆಂದಿದ್ದೆ. ಆದರೆ" ಎಂದು ಮಾತು ಮುಗಿಸುವ ಮುನ್ನ ಅವರು

"ನನಗೂ ಈಗ ಹತ್ತದಿನೈದು ದಿನಗಳ ಹಿಂದೆ ಕನಸಿನಲ್ಲಿ ನೀವು ಬಂದು ಬಿನ್ನವತ್ತಳೆ ಇತ್ತಂತಾಗಿ ನಾನು ಹೊರಟುಬಂದೆ."

"ಮನಸಿನಂತೆ ಮಹದೇವ ಒಳ್ಳೆಯದೇ ಆಯಿತು. ಯಾವಾಗ ಬಂದ್ರಿ?"

"ಪ್ರವಚನ ಆರಂಭವಾದಾಗಲೇ ಬಂದೆ. ಮಧ್ಯದಲ್ಲಿ ಯಾಕೆ ತೊಂದ್ರೆ ಮಾಡೋದು ಅಂತ ಅಲ್ಲೇ ಕುಳಿತೆ. "

"ಮುಂದಿನ ಮಾತು ಆಮೇಲೆ. ಈಗ ಪ್ರಯಾಣದ ಆಯಾಸದಲ್ಲಿದ್ದೀರಿ ಮೊದಲು ಹೋಗಿ ಸ್ನಾನ ಮಾಡಿಕೊಂಡು ಬನ್ನಿ. ಪೂಜೆ ಮಾಡಿ ಪ್ರಸಾದ ಸ್ವೀಕರಿಸುವಿರಂತೆ, "

"ಆಗಲೀ ಬುದ್ಧೀ "

ಎಂದು ನಡೆದರು. ಗುರುಮಠದ ಪಟ್ಟಾಧಿಕಾರಿಗಳಾದ ಚಿಕ್ಕ ಗುರುಸಿದ್ಧ ಸ್ವಾಮಿಗಳಾದಮೇಲೆ ಸರ್ಪಭೂಷಣ ಶಿವಯೋಗಿಗಳು ಮಠದ ಎಲ್ಲರಿಗೂ ಪರಿಚಯ ಮಾಡಿಕೊಟ್ಟರು.

ಪಾಲಲೋಚನರಿಗೊಂದು ಕೊಠಡಿಯು ಸಿದ್ಧವಾಯಿತು. ಅಲ್ಲಿಯೇ ಅವರು ವಾಸವಾಗತೊಡಗಿದರು. ಕೆಲವು ದಿನಗಳಲ್ಲಿಯೇ ಮಠದ ವಾತಾವರಣವು ಅವರಿಗೆ ಒಗ್ಗಿಕೊಂಡಿತು. ದಿನನಿತ್ಯದ ಕರ್ಮದಲ್ಲಿ ಅಣಿಯಾಗತೊಡಗಿದರು.

‡ ‡ ‡ ‡ ‡

ಸಪ್ಪಣ್ಣಾರ್ಯರು ಅಂದು ಬೆಳಗಿನ ಶಿವಪೂಜೆಯನ್ನು ಮುಗಿಸಿ ಓಂಕಾರೇಶ್ವರ ದೇವಾಲಯದ ಮುಂದೆ ಕುಳಿತಿರಲು ಅಲ್ಲಿಗೆ ಕೆಂಪು ನೂಲು ನಂಜುಂಡಪ್ಪನವರು ಬಂದು ಸ್ವಾಮಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ ನಿಲ್ಲಲು ಸರ್ಪಭೂಷಣ ಶಿವಯೋಗಿಗಳು ಅವರನ್ನುದ್ದೇಶಿಸಿ—

"ಏನು ವಿಷಯ ?" ಎಂದರು.

"ಮಹಾಸ್ವಾಮಿಗಳೇ ಕಂಚುಗಲ್ಲು ಬೆಟ್ಟದ ಮಹಾ ಕ್ಷೇತ್ರದಲ್ಲಿ ಕೆಲವು ಬೆಂಗಳೂರಿನ ವೀರಶೈವರಿಗೆ ದೀಕ್ಷೆ ನೀಡಬೇಕು ಎಂಬ ಅಭಿಲಾಷೆ ನಮ್ಮದು. ಅಲ್ಲದೆ ಸುತ್ತ ಮುತ್ತಲಿನ ಅನೇಕ ಹಳ್ಳಿಗಳಲ್ಲಿನ ವೀರಶೈವರಿಗೂ ಸಹ ದೀಕ್ಷೆ ನೀಡಬೇಕು. ವೀರಶೈವ ಧರ್ಮದ ಪ್ರಕಾರ ಮೋಕ್ಷವನ್ನು ಪಡೆಯಲು ದೀಕ್ಷೆಯನ್ನು ಹೊಂದುವುದು ಬಹಳ ಅವಶ್ಯವಿದೆ. ಸುಮಾರು ಏಳು ನೂರು ಜನರು ಈ ಕರ್ಮಕ್ಕೆ ಒಳಗಾಗಬೇಕಾಗಿದೆ. ಅದು ತಮ್ಮಂತಹ ಮಹಾ ಗುರುಗಳ ಕೈಯಿಂದಲೇ ನೆರವೇರಬೇಕು."

"ಆದಕ್ಕೋಸ್ಕರ ಶಿವರಾತ್ರಿ ಹಬ್ಬದಂದು ಈ ಪುಣ್ಯ ಕಾರ್ಯವನ್ನು ನೆರವೇರಿಸಬೇಕು."

"ನೋಡೋಣ... ಯೋಚನೆ ಮಾಡುತ್ತೇನೆ"

"ಆಗಲೀ ಬುದ್ಧಿ" ಎಂದು ಅಡ್ಡ ಬಿದ್ದು ಊರಿನತ್ತ ನಡೆದರು.

ಶಿವರಾತ್ರಿಯ ದಿನವೂ ಬಂತು!

ಲಿಂಗಾಕಾರದ ಬಂಡೆಯ ಬೆಟ್ಟ. ಅಲ್ಲಲ್ಲಿ ದೊಣೆಗಳು, ಮರಗಿಡಗಳು, ಈಶ್ವರ ದೇವಾಲಯ, ಹಿತವಾದ ಪ್ರಕೃತಿ ಸೌಂದರ್ಯ, ಹಿಂದೊಮ್ಮೆ ಕಳ್ಳರು ಹುಡಿ ಕಂಚಿನ ಘಂಟೆಗಳನ್ನು ಕದ್ದೊಯ್ಯುತ್ತಿರುವಾಗ ಯಾರೋ ಕಂಡು ಬೆನ್ನಟ್ಟಿ ಹೋದಾಗ ಬೆಟ್ಟದ ಮೇಲಿನ ದೊಣೆಯೊಳಗೆ ಎಸೆದು ಆ ಕಳ್ಳರು ಪರಾರಿಯಾದರಂತೆ, ಅಂದಿನಿಂದ ಈ ಕ್ಷೇತ್ರ ಕಂಚುಗಲ್ಲು ಬೆಟ್ಟ. ಮಹಾಕ್ಷೇತ್ರ ದಲ್ಲಿನ ಸುತ್ತಲಿನ ಹೊಲಗಳು, ಗದ್ದೆಗಳು ಕೆರೆಕಟ್ಟೆಗಳು, ಆನಂದವೀಯುವ ತ್ತಿದ್ದವು. ಕಂಚುಗಲ್ಲು ಬೆಟ್ಟದಮೇಲೆ ದೀಕ್ಷಾ ಕಾರ್ಯಕ್ರಮಕ್ಕೆ ಸಕಲ ಸಿದ್ಧತೆಗಳು ನಡೆದುವು. ದೇವಾಲಯದ ಮುಂಭಾಗದಲ್ಲಿ ತಳಿರು ತೋರಣ ಗಳಿಂದ ಅಲಂಕಾರವಾಯಿತು. ಹಸಿರು ಚಪ್ಪರ ಸಿದ್ಧವಾಯಿತು. ಒಂದೆಡೆ ಭಕ್ಷ್ಯ ಭೋಜ್ಯಗಳು ಸಿದ್ಧವಾದುವು. ಮತ್ತೊಂದೆಡೆ ದೀಕ್ಷೆಗೆ ಅಣಿ ಯಾಗುತ್ತಿದೆ.

ಬೆಂಗಳೂರಿಗೆ ಸರ್ಪಭೂಷಣ ಶಿವಯೋಗಿಗಳನ್ನು ಕರೆತರಲು ಎತ್ತಿನ ಬಂಡಿಯನ್ನು ಕಳುಹಿಸಿದ್ದಾರೆ. ವಿಷಯವನ್ನು ಪಾಲಲೋಚನರು ತಿಳಿ ಸಲು ಗುರುಗಳ ಹತ್ತಿರ ಬಂದು—

"ಕಂಚುಗಲ್ ಬೆಟ್ಟಕ್ಕೆ ತಾವು ದಯಮಾಡಿಸಲು ಎತ್ತಿನಗಾಡಿ ಬಂದಿದೆ ಬುದ್ಧಿ"

"ನೀವು ಹೋಗಿ ಬನ್ನಿ...."

"ಇಲ್ಲ ಅದು ನಿಮ್ಮಿಂದಲೇ ನೆರವೇರಬೇಕೆಂಬುದು ಜನಗಳ ಆಕಾಂಕ್ಷೆ ಆದಕ್ಕೆ ಕರೆದುಕೊಂಡು ತರಲಿ ನಾನು"

"ಯಾರಾದರೇನು? ನೀವು ಹೋಗಿ ಬನ್ನಿ" ಎನ್ನಲು,

"ಆಗಲೀ ಬುದ್ಧಿ" ಎಂದು ಅವರ ಆಜ್ಞೆಯಂತೆ ಪಾಲಲೋಚನರೇ ಹೊರಡುವರು.

    

ಗುರುಗಳು ಮಠದಲ್ಲಿ ತಿರುಗಾಡುತ್ತಿರಲು ಅಲ್ಲಿಗೆ, ಹೊಲೆಯರ ಕೆಂಪ ಬಂದ. ಸರ್ಪಭೂಷಣ ಶಿವಯೋಗಿಗಳು ಜೊತೆಯಲ್ಲಿ ಕೆಲವು ಭಕ್ತರು ಇದ್ದರು ಅವರನ್ನು ನೋಡಿದ ಕೆಂಪ ಎದ್ದು ನಿಂತು ಗುರುಗಳಿಗೆ ದೂರದಿಂದಲೇ ದೀರ್ಘ ದಂಡ ನಮಸ್ಕಾರವನ್ನು ಮಾಡುತ್ತಿರಲು ಅವರಲ್ಲೊಬ್ಬ ಭಕ್ತ—

"ಏಯ್ ಕೆಂಪ ಏನು ಗುರುಗಳ ಹತ್ತಿರಕ್ಕೆ ಬರ್‍ತಿದ್ದೀಯಲ್ಲಾ ನಿಂಗೇನು ಜ್ಞಾನ ನೆಟ್ಟಗಿದ್ಯೋ ಹ್ಯಾಗೆ?" ಎಂದ.

ಗುರು ಸರ್ಪಭೂಷಣರು ಕೂಡಲೇ—

"ಏಕೆ ಹತ್ತಿರ ಬಂದು ಕಾಲ್ಮುಟ್ಟಿ ನಮಸ್ಕರಿಸಿದರೆ ತಾನೇ ಏನು? ಬಾಯ್ಯಾ ಕೆಂಪಾ...ಬಾ" ಎನ್ನಲು ಕೆಂಪ ತರಗುಟ್ಟುತ್ತಾ—

"ಬುದ್ಧೀ...ಇದೇನು ನೀವು ಹೇಳ್ತಾ ಇರೋದು?"

"ಕೊಂಚ ಬಾರಯ್ಯಾ...ಕಾಲ್ಮುಟ್ಟಿಯೇ......ನಮಸ್ಕರಿಸು, ಏನೂ ಆಗೋಲ್ಲಾ"

ಆತ ಉಗಳು ನುಂಗುತ್ತಾ, "ತಪ್ಪಾಯ್ತು ಬುದ್ಧಿ" ಎಂದ.

"ಪರವಾಗಿಲ್ಲ ಬಾ.......ಗುರುಗಳು ಹೇಳಿದಮೇಲೆ ಇಲ್ಲ ಅನ್ನಬಾರದು ಬಾ....ನಿಜವಾಗಿಯೇ ನಾನು ಹೇಳುತ್ತಿರುವುದು."

ಎನ್ನಲು ವಿಧಿಯಿಲ್ಲದೆ ಕಾಲ್ಮುಟ್ಟಿ ನಮಸ್ಕರಿಸಿದ. ಎಲ್ಲರೂ ಬೆಕ್ಕಸ ಬೆರಗಾಗಿ ನಿಂತಿರಲು—

"ಏನಪ್ಪಾ ನೀವು ಹರಿಜನರಾದರೇನು? ಗಿರಿಜನರಾದರೇನು? ನೀವು ಮುಟ್ಟಿದರೆ ಏನಾಗುತ್ತದೆ? ಭಕ್ತಿಯಿಂದ ಮುಟ್ಟಿದರೆ ಎಲ್ಲರ ಸ್ಪರ್ಶವೂ ಅರ್ಪಿತ."

ಎನ್ನಲು ಎಲ್ಲರೂ "ತಪ್ಪಾಯ್ತು ಬುದ್ಧಿ" ಎಂದು ಕ್ಷಮೆ ಯಾಚಿಸಿದರು. ಗುರುಗಳು ಆತನಿಗೆ ಆಶೀರ್ವದಿಸಿ ಮುಂದಾದರು. ಭಕ್ತರು ಅವರನ್ನು ಹಿಂಬಾಲಿಸಿದರು.

‡ ‡ ‡ ‡ ‡

ಬಳೇಪೇಟೆಯ ಗರಡಿಯ ಉಸ್ತಾದರು ವಾರ್ಷಿಕೋತ್ಸವ ಮಾಡಲಿಕ್ಕೆ ಯೋಚಿಸಿ ಅಧ್ಯಕ್ಷತೆಗೆ ಸರ್ಪಭೂಷಣ ಶಿವಯೋಗಿಗಳನ್ನು ಆಹ್ವಾನಿಸಲು ಬಂದರು. ಒಕ್ಕಲು ಮಕ್ಕಳು ಗುರುಗಳನ್ನು ಮೊದಲು ಹೋಗಿ ನಮಸ್ಕರಿಸಿ—

"ಬುದ್ಧೀ ತಾವು ನಮ್ಮ ಗರಡಿಯ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿ ಆಶೀರ್ವದಿಸಬೇಕು ಬುದ್ಧೀ" ಎನ್ನಲು

"ಗರಡಿಗೂ ನನಗೂ ಏನು ಸಂಬಂಧ? ಬೇರೆ ಯಾರಾದರೂ ದೊಡ್ಡ ಕುಸ್ತಿಗಾರರನ್ನು ಕರೆಸಬಹುದಲ್ಲಾ " ಎಂದರು ಮುಗುಳ್ನಗೆಯೊಂದಿಗೆ.

"ಇಲ್ಲ ಬುದ್ಧಿ ನಾವು ನಿಮ್ಮನ್ನು ಕರೆಯುತ್ತಿರುವುದು ನಮ್ಮ ಸಾಧನೆಯನ್ನು ನೋಡಲಿಕ್ಕೆ. ನಿಮ್ಮ ಮನಸ್ಸನ್ನು ಸಂತೋಷಪಡಿಸಿ ಆಶೀರ್ವಾದ ಪಡೆಯಲಿಕ್ಕೆ, ಮತ್ತಾವ ಡಂಬಾಚಾರಕ್ಕೂ ಅಲ್ಲ" ಎಂದರು ಉಸ್ತಾದ್.

ಗುರುಗಳು ಒಂದು ಘಳಿಗೆ ಯೋಚಿಸಿ—

"ಆಗಲೀ....ಬರುತ್ತೇನೆ " ಎಂದು ತಮ್ಮ ಸಮ್ಮತಿಯನ್ನು ಸೂಚಿಸಿದರು.

ಸಂಜೆ ಗುರುಗಳನ್ನು ಕರೆತರಲು ಒಂದು ಕುದುರೆ ಗಾಡಿಯೂ ಬಂತು. ಜಟ್ಟಿಗಳಿಂದ ಕುಸ್ತಿ ಆರಂಭವಾದುವು. ಅವರು ಬೆಳೆಸಿದ ಮೈಕಟ್ಟು ಅವರ ಸಾಧನೆಗಳನ್ನು ಗುರುಗಳು ಮನದಲ್ಲೇ ಲೆಕ್ಕ ಹಾಕಿದರು. ಎಲ್ಲ ಪಂದ್ಯಗಳು ಮುಗಿದ ಮೇಲೆ ಎಲ್ಲರಿಗೂ ಬಹುಮಾನ ವಿತರಣೆಯು ಸರ್ಪಭೂಷಣರ ಅಮೃತ ಹಸ್ತದಿಂದಲೇ ನೆರವೇರಿತು. ನಂತರ ಎರಡು ಮಾತಾಡಬೇಕೆಂದು ಉಸ್ತಾದ್ ಕೇಳಿಕೊಳ್ಳಲು, ಸರ್ಪಭೂಷಣರು ಮೇಲೆದ್ದು ನಾಲ್ಕು ಮಾತುಗಳನ್ನಾಡಲೇ ಬೇಕಾಯಿತು.

"ನೀವುಗಳೆಲ್ಲಾ ಗರಡಿಯಲ್ಲಿ ಬಹಳ ಸಾಧನೆ ಮಾಡಿ ತೋರಿಸಿದ್ದೀರಿ, ಆದರೆ ನಿಜ ಜೀವನದಲ್ಲೂ, ಒಳ ಜೀವನದಲ್ಲೂ ಗರುಡಿ ಸಾಧಿಸಬೇಕು. ಹಾಗಾದರೆ ತಾನೇ ಒಳ್ಳೆಯದು" ಎನ್ನುತ್ತಾ,

ತನುವೆಂಬ ಗರುಡಿಯೊಳನುಭವಧೀರರು
ಘನಯೋಗ ಸಾಧನೆಯನು ಮಾಡಿರೋ।
ಮನುಜರೊಲಿವ ನಿಮ್ಮ ಬಿನುಗು ಸಾಧನೆಯಿಂದೆ
ಜನನ ಮರಣವಂಜಿ ಓಡವುವೇ ? ॥ ಪ ॥
ಸ್ಥಿರ ಬುದ್ಧಿಯೆಂದೆಂಬ ಸಮನಾದ ನೆಲದೊಳು
ಗುರು ಬೋಧೆಯೆಂಬ ದಂಡೆಗಳನೊತ್ತಿ।
ಪರತತ್ತ್ವ ವಿವರದಬೆಸಿಗೆಗಳನೆ ಹಾಕಲು
ಅರಿವೆಂಬ ಕೋಣಶವನೊತ್ತಿ ಕಟ್ಟಿ ॥ ೧ ॥

ನಾದ ಬಿಂಧುಗಳೆಂಬ ಸಂಗ್ರಾಣಗಳನೆತ್ತು
ತಾದಿ ಚಿತ್ ಕಳೆಯ ಲೋಡನೆ ಶಿರುಹಿ।
ಮೋದದಿ ನಡುನಾಡಿ ಗಂಭವ ತುದಿಗೇರಿ
ಭೇದಿಸಿ ಬ್ರಹ್ಮ ಸಾಧನೆಗಲಿತು ॥೨॥

ಭರದಿಂದೆ ಯಮಭಟರುಗಳನ್ನು ಮುರಿದೊತ್ತಿ
ಪರಿಭವವೆಂದೆಂಬ ವೈರಿಯನೆ ಕೊಂದು।
ಗುರುಸಿದ್ಧನೆಂಬ ಚಕ್ರೇಶನ ಮೆಚ್ಚಿಸಿ
ಪರಮುಕ್ತಿ, ಪದವಿಯ ಪಡೆಯಲೆಂದು ॥೩॥

ಎಲ್ಲರೂ ಅದಕ್ಕೆ ಒಪ್ಪಿಗೆ ಸೂಚಿಸುವಂತೆ ಚಪ್ಪಾಳೆಯನ್ನು ತಟ್ಟಲಾರಂಭಿಸಿದರು. ಗರುಡಿ ಮುಗಿದಂತೆ ಒಬ್ಬ ಹಣ್ಣು ಮುದುಕಿ ಕುರುಬರ ಸೋಮಮ್ಮ ಬಂದು ನಮಸ್ಕರಿಸಿ ನಿಂತಳು. ಗುರುಗಳು ಮುಂದೆ ಹೋಗುತ್ತಿದ್ದಂತೆಯೇ ಮತ್ತೆ ಆಕೆಯ ಧ್ವನಿ ತಡೆದು ನಿಲ್ಲಿಸಿತು. "ಬುದ್ಧೀ" ಎನ್ನುತ್ತಿದ್ದಂತೆ ನಡೆಯುತ್ತಿದ್ದ ಹಾವುಗೆಗಳ ಶಬ್ದ ಥಟ್ಟನೆ ನಿಂತಿತು.

"ಏನಮ್ಮಾ?"ಎಂದು ವಿನಯದಿಂದ ಮಾತಾಡಿಸಿದರು ಗುರುಗಳು.

"ಬುದ್ಧಿ.... ಈ ನನ್ನ ಕೊನೆ ದಿನಗಳಲ್ಲಾದ್ರೂ ತಮ್ಮ ಮಠದ ಸ್ಯಾವೆ ಮಾಡ್ಕೊಂಡೋಯ್ತೀನಿ ಬುದ್ಧಿ...." ಎಂದಳು ಸೋಮಮ್ಮ.

"ಅಷ್ಟೇ ತಾನೇ ಆಗತ್ಯವಾಗಿ ಬಾರಮ್ಮ"

ಎನ್ನಲು ಸಂತೋಷದಿಂದ ಒಪ್ಪಿಕೊಂಡು ಮಠವನ್ನು ತಲುಪುವಳು.

ಅಂದು ರಾತ್ರಿ ಮಠದಲ್ಲಿ ಮಲಗಿದಳು. ಕೋಳಿ ಕೂಗಿಯೂ ಆಯಿತು. ಆದಗೂ ಇನ್ನೂ ಏಳದೆ ಮುದುಕಿ ಸೋಮಮ್ಮ ಮಲಗಿರಲು... ಗುರು ಸರ್ಪಭೂಷಣರು ಬಂದು —

"ಏನಮ್ಮಾ, ಸೋಮಮ್ಮ ಕೋಳಿ ಕೂಗಿ ಆಯಿತು. ಬೆಳಕು ಹರಿಯಲಾರಂಭಿಸುತ್ತಿದೆ.

"ಇನ್ನೂ ಎದ್ದಿಲ್ಲ"

ಕೋಳಿ ಕೂಗಿತು ಮಗಳೆ ಬೆಳಗಾಯಿತೇಳಮ್ಮ।
ಹೇಳಲಿದರೊಳು ಮರ್ಮ ಬಹಳವಿದೆಯಮ್ಮ ॥ ಪ ॥

ಮೂರು ನದಿಗಳ ಸಂಗಮಸ್ಥಳದೊಳಾಡುತಿಹ
ದಾರು ವರ್ಣಗಳದರ ಮೆಯ್ಯೊಳುಂಟು ।
ಹಾರಿ ಮೇಲಕ್ಕೆ ಹಂಸಗಳೆರಡನು ನುಂಗು
ತೀರ್ದೈದು ತೆರನಾದ ಧ್ವನಿಗಳನೆ ತೋರಿ ॥ ೧ ॥

ಹಲವು ಮಂತ್ರದೊಳದರ ಹೆಸರೆ ಮೊದಲಿರುತಿಹುದು
ನೆಲಸಿಹವು ಚಂದ್ರ ತಾರೆಗಳದರೊಳು ।
ಜಲದೈದರ ಮೇಲೆ ಮನೆಮಾಡಿಕೊಂಡಿಹುದು
ಸಿಲುಕದಾರಿಗೆ ಕೈಗಳಿಂದ ಹಿಡಿಯಲ್ಕೆ ॥ ೨ ॥

ಒಂದು ಬಾರದರ ದನಿಗೇಳಿದವರಿಗೆ ಮುಂದ
ಕೆಂದೆಂದಿಗೆಯು ನಿದ್ರೆ ಬಾರದಿಹುದು
ತಂದೆ ತಾಯಿಲ್ಲದುದಿಸಿಹುದಳಿದು ಹೋಗದಿದ
ರಂದವನು ಗುರು ಸಿದ್ಧ ದೇವನೆ ಬಲ್ಲ ॥ ೩ ॥

ಎನ್ನಲು ಮುದುಕಿ ಎಚ್ಚರಗೊಂಡು—

"ತಪ್ಪಾಯ್ತು ಬುದ್ಧಿ ಯಾನೋ ನಿದ್ದೆ ಹತ್ಬಿಟ್ಟಿತ್ತು....ಎದ್ಬುಟ್ಟೆ ಸ್ವಾಮಿ"

ಎಂದು ಸ್ನಾನ ಮುಗಿಸುವ ಮೊದಲೇ ಮಠದ ಆವರಣವನ್ನೆಲ್ಲಾ ಚೊಕ್ಕಟಮಾಡಿ ದನಕರುಗಳ ಕೊಟ್ಟಿಗೆಯನ್ನೆಲ್ಲಾ ಸ್ವಚ್ಛಗೊಳಿಸಿನಂತರಸ್ನಾನ ಮಾಡಿ ವಿಭೂತಿಯನ್ನು ಧರಿಸಿಕೊಂಡು ದೇವರ ಧ್ಯಾನವನ್ನು ಮಾಡುತ್ತಾ ಕುಳಿತಳು. ಆಕೆಯನ್ನು ಗುರುಗಳು ನೋಡಿ ಒಳಗೇ ನಗುತ್ತಾ ತಮ್ಮ ನಿತ್ಯಕರ್ಮಗಳಲ್ಲಿ ನಿರತರಾದರು. ಅಂದೇ ಆಯಿತು! ಸೋಮಮ್ಮ ಬೆಳಕು ಹರಿಯುವುದಕ್ಕೆ ಮುಂಚೆ ಎದ್ದು ತನ್ನ ಕರ್ತವ್ಯವನ್ನು ಮಾಡಲಾರಂಭಿಸಿದಳು. ಮಠವನ್ನು ಸೇರಿದ ಮೇಲೆ ಜಡತ್ವಗಳನ್ನೆಲ್ಲ ಕಳೆದು ನಿರ್ಮಲಳಾದಳು.

‡ ‡ ‡ ‡ ‡

ಇತ್ತೀಚೆಗೆ ಶ್ರೀ ಮಠದಲ್ಲಿ ಪ್ರವಚನಗಳು ಗುರುಸಿದ್ಧ ಸ್ವಾಮಿಗಳವರ ಕಾಲಕ್ಕಿಂತಲೂ ಹೆಚ್ಚಾಗಿ ನಡೆಯಲಾರಂಭಿಸಿದುವು. ಒಮ್ಮೆ ಶಿವಪ್ಪ ಶಾಸ್ತ್ರಿಗಳು ಸರ್ಪಭೂಷಣರನ್ನು ಕಂಡು—

"ಬುದ್ಧೀ..." ಎಂದರು.

"ಏನು ಶಾಸ್ತ್ರಿಗಳೇ ?"

"ಬುದ್ಧಿ ತಮ್ಮ "ಕೈವಲ್ಯ ಕಲ್ಪವಲ್ಲರಿ "ಯ ಕೆಲವು ಪದ್ಯಗಳನ್ನು ನೋಡಿದೆ, ನಿಜವಾಗಿಯೂ ಏಕತಾರಿಯಲ್ಲಿ ಸೊಗಸಾಗಿ ಹಾಡಬಹುದು. ಪ್ರವಚನಕ್ಕೆ ನಿಮ್ಮ ಕೈವಲ್ಯ ಕಲ್ಪವಲ್ಲರಿಯನ್ನೇ ಆರಿಸಿಕೊಂಡಿದ್ದೇನೆ. ಅದಕ್ಕೆ ವ್ಯಾಖ್ಯಾನವನ್ನು ನೀವೇ ನೀಡಿದರೆ ಉತ್ತಮ"

"ಫಾಲಲೋಚನ ಸ್ವಾಮಿಗಳಿದ್ದಾರೆ. ಚಿಕ್ಕ ಗುರುಸಿದ್ಧ ಸ್ವಾಮಿಗಳಿದ್ದಾರೆ ಅವರು ಆ ಕಾರ್ಯವನ್ನು ನಿರ್ವಹಿಸಲಿ"

"ನೀವು ಅಧ್ಯಕ್ಷ ಸ್ಥಾನ ವಹಿಸಬೇಕು."

"ಈ ದಿನ ಮಾತ್ರ ನಾನು ಬರುತ್ತೇನೆ. ಪ್ರತಿದಿನವೂ ನಾನು ಬರಲಿಕ್ಕಾಗುವುದಿಲ್ಲ"

"ಅಷ್ಟಾದರೂ ಮಾಡಿ ಒಳ್ಳೇ ವ್ಯಾಖ್ಯಾನ ಮಾಡುವಂತೆ ಹರಿಸಿ ಹಾರೈಸಿದರೆ ನಾವು ಪ್ರವಚನವನ್ನು ಮುಂದುವರಿಸುತ್ತೇವೆ"

"ನೀವು ಇಷ್ಟು ಹೇಳಿದ ಮೇಲೆ ನಾನು ಖಂಡಿತ ಬರುತ್ತೇನೆ. ಮುಂದಿನ ಕಾರ್ಯ ನಡೆಸಿ" ಎಂದರು.

"ಬಹಳ ಸಂತೋಷ ಬುದ್ಧಿ. ನಿಜಗುಣರು ಒಂದು ಪ್ರಕರಣದಲ್ಲಿ ಹೇಳಿರುವುದನ್ನು ನೀವು ಒಂದು ಪದ್ಯದಲ್ಲಿ ನಿರೂಪಿಸಿದ್ದೀರಿ. ಒಂದು ಪದ್ಯವನ್ನು ಎರಡು ಚರಣಗಳಲ್ಲೇ ಮುಗಿಸಿದ್ದೀರಿ"

"ಅಷ್ಟು ಕೊಂಡಾಟ ಬೇಡಿ. ನಿಜಗುಣರೆಲ್ಲಿ, ನಾವೆಲ್ಲಿ ?"

"ಇಲ್ಲ ಅವತಾರವೇ ನೀವು"

"ನಡೆಯಿರಿ ಪ್ರವಚನಕ್ಕೆ ಸಮಯ ಆಯಿತು"

ಎನ್ನಲು ಸಂತಸದಿಂದ ಶಿವಪ್ಪ ಶಾಸ್ತ್ರಿಗಳು ಪ್ರವಚನದ ಹಜಾರಕ್ಕೆ ನಡೆದರು.

‡ ‡ ‡ ‡ ‡

ಒಂದು ದಿನ ಶಿಪ್ಪಶೆಟ್ಟರ ಮಠದಲ್ಲಿ ಸರ್ಪಭೂಷಣರ ಮುಂದೆ ಭಕ್ತಾದಿಗಳು ಸೇರಿದ್ದಾರೆ. ಅನೇಕ ವಿಚಾರಗಳ ಚರ್ಚೆಯಾದ ಮೇಲೆ ಭಕ್ತ ನಂಜುಂಡಪ್ಪನವರು—

"ಬುದ್ಧಿ ಹೊಸದಾಗಿ ನಿಮಗೊಂದು ಮಠವನ್ನೇಕೆ ಕಟ್ಟಬಾರದು ?" ಎನ್ನಲು,

"ಯಾಕೆ ನಂಜುಂಡಪ್ಪನವರೇ ಈಗಿರುವ ಮಠ ಸಾಲದೇ ?"

"ಹಾಗಲ್ಲ ಬುದ್ಧಿ ಈಗ ಮುಮ್ಮಡಿ ಕೃಷ್ಣರಾಜೇಂದ್ರರ ಮೆಚ್ಚಿಗೆ ಪಾತ್ರರಾದ ತೋಫಖಾನೆ ಕೃಷ್ಣಪ್ಪನಾಯಕರು ಜಿಲ್ಲಾಧಿಕಾರದಲ್ಲಿದ್ದಾರೆ. ಅವರಿಗಂತೂ ನಿಮ್ಮಲ್ಲಿ ಅಪಾರ ಭಕ್ತಿ. ಅದುದರಿಂದ ಅವರನ್ನು ಎಲ್ಲಾದರೂ ಒಂದು ಜಾಗ ಕೊಡಿಸಿ ಎಂದು ಕೇಳಿದರೆ ಮಠಕ್ಕಾಗಿ ಕೊಡಿಸುತ್ತಾರೆ. ನಾವೂ ಸ್ವಲ್ಪ ಹಣ ಶೇಖರಿಸಿ ಒಂದು ಹೊಸ ಮಠವನ್ನು ಕಟ್ಟಿಸಬಹುದು."

"ಆದರೆ ಅದಕ್ಕಾಗಿ ಏಕೆ ಎಲ್ಲರನ್ನು ಕೇಳಿ ಅವರ ಮನಸ್ಸಿಗೆ ನೋವು ಉಂಟಾಗುವಂತೆ ಮಾಡಬೇಕು. ?"

"ಕೇಳಿ ತಂದು ಮಾಡುವವರು ನಾವಿದ್ದೇವೆ. ನೀವು ಅದರ ಬಗ್ಗೆ ಚಿಂತಿಸದೆ ಅನುಮತಿ ಕೊಟ್ಟರೆ ಸಾಕು."

"ನನ್ನ ಹತ್ತಿರವಂತೂ ಈಗ ಹಣ ಇಲ್ಲ ದೇಶಾಟನೆಯಲ್ಲಿ ನನಗೆ ಬಿನ್ನಹ ಪೂಜೆಗಳಲ್ಲಿ ಬಂದ ಹದಿನಾರು ಸಾವಿರ ರೂಪಾಯಿಗಳನ್ನು ಬಳ್ಳಾರಿಯ ರೊಟ್ಟಿ ವಿರೂಪಾಕ್ಷಪ್ಪನವರ ಮನೆಯಲ್ಲಿಟ್ಟು ಬಂದಿರುವೆ. ಅವರು ಯಾವಾಗ ಕೇಳಿದರೂ ಕೊಡುತ್ತಾರೆ. ಈ ಶ್ರೀಮಠದ ಶ್ರೇಯಸ್ಸಿಗೇ ಅದನ್ನು ಮೀಸಲಾಗಿಟ್ಟಿದ್ದಾರೆ. ಅದನ್ನು ಬೇಕಾದರೆ ಉಪಯೋಗಿಸಿಕೊಳ್ಳಬಹುದು. ನನ್ನ ಅಭ್ಯಂತರವೇನೂ ಇಲ್ಲ."

"ಅದಕ್ಕೇನಂತೆ ಆಗಲೀ ಬುದ್ಧಿ. ಮತ್ತೊಂದು ಆಸೆ ನನ್ನ ಮನಸಿನಲ್ಲಿದೆ."

"ಅದೇನು?"

"ಈ ಮಠದಲ್ಲಿ ಒಂದು ಪುಟ್ಟ ದೇವಾಲಯ ಮಾಡಿ "ಓಂಕಾರೇಶ್ವರ" ನನ್ನು ಪ್ರತಿಷ್ಠಾಪನೆ ಮಾಡಬೇಕೆಂಬ ಆಸೆ"

"ದೈವ ಸಂಕಲ್ಪವೇನೋ ನೋಡೋಣ. ಆತನ ಸಂಕಲ್ಪದಂತೆ ನೆರವೇರಲಿ."

"ಮನುಷ್ಯನಿಗೆ ಸಾಧ್ಯವಾಗದದ್ದು ಯಾವುದು ಬುದ್ಧಿ? ನಾವು ಇದಕ್ಕೆ ಶ್ರಮ ಪಡುತ್ತೇವೆ."

"ನಿಮಗೆ ಮಂಗಳ ಉಂಟಾಗಲಿ"ಎಂದು ಹರಸಿದರು. ಕೆಲವು ದಿನಗಳಾದ ಮೇಲೆ ದೇವಾಲಯಕ್ಕೆ ಸ್ಥಳವನ್ನು ಪಡೆದರಲ್ಲದೆ ನಿರಂತರವಾಗಿ ಕಾರ್ಯವನ್ನು ಆರಂಭ ಮಾಡಿದರು. ಪಾಲಲೋಚನರು ದೇವಾಲಯವನ್ನು ಕಟ್ಟಿಸುವ ಕಾರ್ಯದಲ್ಲಿ ಸಹಾಯಕರಾಗಿ ನಿಂತರು. ಕಾರ್ಯ ನಿರಂತರವಾಗಿ ನಡೆಯುತ್ತಿತ್ತು. ಭಕ್ತಾದಿಗಳು ಕಟ್ಟಡದ ಕೆಲಸದಲ್ಲಿ ಶ್ರಮಿಸುತ್ತಿದ್ದರು.

ಗುರು ಸರ್ಪಭೂಷಣರು ಅಟ್ಟದಮೇಲೆ ಕುಳಿತು ತತ್ತ್ವ ಗ್ರಂಥದ ರಚನೆಯಲ್ಲಿ ತೊಡಗಿದ್ದರು. ಪಾಲಲೋಚನ ಸ್ವಾಮಿಗಳು ಮಠದ ಮುಂದೆ ತರಕಾರಿಯ ಗಿಡಗಳಿಗೆ ನೀರನ್ನು ಹಾಕಿಸುತ್ತಾ ನಿಂತಿದ್ದರು. ಅಲ್ಲಿಗೆ ಯಾರೋ ವ್ಯಕ್ತಿ ಬಂದರು ಕೂಡಲೇ ಅವರು ಬಂದು ಪಾಲಲೋಚನ ಸ್ವಾಮಿಗಳಿಗೆ ನಮಸ್ಕರಿಸುತ್ತಿದ್ದಂತೆಯೇ ಅವರು—

"ಯಾರು? ಎಲ್ಲಿಂದ ಬಂದ್ರಿ?"

"ನಾನು ಪ್ರಭುಸ್ವಾಮಿ. ಮೈಸೂರು ಜಿಲ್ಲಾ ನಂಜನಗೂಡು ತಾಲ್ಲೂಕಿನ "ಕಾರ್ಯ" ಗ್ರಾಮದ ಮಠದ ಸ್ವಾಮಿಗಳು, ನೀವು?"

"ನನ್ನ ಹೆಸರು ಪಾಲಲೋಚನ ಸ್ವಾಮಿಗಳು ಅಂತ, ಮಠದ ಒಳಗಡೆಗೆ ಬನ್ನಿ...ಬುದ್ಧಿ..."

"ಆಗಲೀ........"

ಎಂದು ಇಬ್ಬರೂ ಒಳಗೆ ಹೋದರು ತಕ್ಷಣ, ಪ್ರಭುಸ್ವಾಮಿಗಳು—

"ಸರ್ಪಭೂಷಣರು ಎಲ್ಲಿದ್ದಾರೆ?"

"ಅಟ್ಟದಮೇಲೆ ಕೃತಿ ರಚನೆಯಲ್ಲಿ ತೊಡಗಿದ್ದಾರೆ."

"ಹಾಗಾದರೆ ತೊಂದರೆ ಮಾಡಬಾರದು. ಸ್ವಲ್ಪ ನಿಧಾನಿಸೋಣ ಅವರು ಬಂದಮೇಲೆ ಮಾತಾಡೋಣ."

"ಹಾಗೇ ಆಗಲಿ"

"ನಾನು ಅವರೂ ಇಬ್ಬರೂ ಬಾಲ್ಯದಿಂದಲೂ ಒಡನಾಡಿಗಳು ಪಾಲಲೋಚನ ಸ್ವಾಮಿಗಳೇ."

ಈ ಮಾತುಗಳನ್ನು ಕೇಳಿಸಿಕೊಂಡ ಸರ್ಪಭೂಷಣರು—

"ಪಾಲಲೋಚನರೇ—"

"ಬುದ್ಧೀ......"

"ಯಾರು ಕರೆದುಕೊಂಡು ಬನ್ನಿ ಮೇಲೆ"

ಎನ್ನಲು ಇಬ್ಬರೂ ಮೇಲೆ ಹೋದರು. ಅವರನ್ನು ನೋಡಿದ ಪ್ರಭು ಸ್ವಾಮಿಗಳು ಸಾಷ್ಟಾಂಗ ನಮಸ್ಕಾರಗಳ ವಿನಿಮಯವಾಯಿತು. ಕ್ಷೇಮ ಲಾಭದ ಮಾತುಗಳಾದುವು.

"ಏನು ಸರ್ಪಭೂಷಣರೇ ಸೌಖ್ಯವೇ?"

"ಇಷ್ಟು ಮಾತ್ರ."

"ತಾವು...?"

"ನಮ್ಮದೂ ನಿಮ್ಮ ಹಾಗೆ"

"ಫಾಲಲೋಚನರೇ, ಇವರು ಸಾಮಾನ್ಯರಲ್ಲ, ಪ್ರಸಿದ್ಧ ಕನ್ನಡ ಸಂಸ್ಕೃತ ಪಂಡಿತರು. ನನ್ನ ಒಡನಾಡಿಗಳು ಆಪ್ತಮಿತ್ರರು."

"ಬಹಳ ಸಂತೋಷ."

"ಅದಿರಲಿ ತಾವೀಗ ರಚಿಸುತ್ತಿರುವ ಗ್ರಂಥ ಯಾವುದು ?"

"ಒಂದು ತತ್ತ್ವ ಗ್ರಂಥ ಬರೆದು ಮುಗಿದ್ದೇನೆ."

"ಏನು ಅದರ ಹೆಸರು ಇಡಬೇಕು ಅಂತಿದ್ದೀರಿ? ಅಥವಾ ಇಟ್ಟದ್ದೀರಿ?"

"ಕೈವಲ್ಯ ಪದ್ಧತಿಯಂತೆಯೇ ತತ್ತ್ವ ಗ್ರಂಥ ಕೈವಲ್ಯ ಕಲ್ಪವಲ್ಲರಿ. ಇದರಲ್ಲಿ ೧೭೭ ಹಾಡುಗಳಿದ್ದು, ಶಿವಕಾರುಣ್ಯ ಪ್ರಾರ್ಥನೆ, ಜೀವಸಂಬೋಧನೆ, ನೀತಿ ಕ್ರಿಯಾಚರ್ಯೆ, ಯೋಗಪ್ರತಿಪಾದನೆ ಜ್ಞಾನಪ್ರತಿಪಾದನೆ ಎಂಬ ಐದು ವಿಭಾಗಗಳವೆ. ನಿಜಗುಣರು ಬರೆದಿದ್ದಾರಲ್ಲ ಹಾಗೆಯೇ ನಾನೊಂದು ಆ ಕಲ್ಪವೃಕ್ಷಕ್ಕೆ ಬಳ್ಳಿ ಹಬ್ಬಿಸುತ್ತೀದ್ದೇನೆ ಅಷ್ಟೇ."

"ಸಂಸ್ಕೃತದಲ್ಲಿ ಯಾವುದೂ ಬರೆಯಲಿಲ್ಲವೇ ?"

"ಇಲ್ಲ, ಮುಂದೆ ಬರೆಯೋಣ"

"ಪಾಲಲೋಚನರೇ ಮಾತಿನಲ್ಲೇ ಕಾಲ ಆಯ್ತು"

"ಈಗ್ಲೇ ಹೊರಟೆ ನಿಮ್ಮ ಪೂಜೆಗಾಗಿ"

"ಬೇಗ ಹೋಗಿ..."

"ಆಗಲೀ ಬುದ್ಧಿ...."

ಎಂದು ಹೇಳಿ ಸ್ವಲ್ಪ ಹೊತ್ತಿನಲ್ಲಿಯೇ ಸಿದ್ಧತೆಗಳನ್ನು ಮಾಡಿ ಬಂದು ಕರೆದುಕೊಂಡು ಹೋದರು. ಇಬ್ಬರೂ ಸ್ನಾನ ಪೂಜೆಮಾಡಿ ಪ್ರಸಾದವನ್ನು ಸ್ವೀಕರಿಸುತ್ತಾ ಹಿಂದಿನ ದಿನಗಳನ್ನು ನೆನೆಸಿಕೊಂಡು ಮಾತುಗಳನ್ನಾಡಿದರು. ಊಟ ಮುಗಿದಮೇಲೆ ಮಠದ ಹಜಾರದ ಮುಂದೆ ಒಂದು ಮುಂಚದ ಮೇಲೆ ಕುಳಿತರು. ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದಾಗ ಸರ್ಪಭೂಷಣರು,

"ನಮ್ಮ ಮಠದಲ್ಲಿ ಇನ್ನು ಕೆಲವು ದಿನ ಇದ್ದು ಪ್ರವಚನ ಮಾಡಿ ಹೋಗಬೇಕು ನೀವು"

"ನಿಮ್ಮ ಆಜ್ಞೆ ಆದಮೇಲೆ ಹಾಗೆಯೇ ಆಗಲಿ"

ಎಂದು ಹೇಳಿ ಕೆಲವು ದಿನಗಳಿದ್ದು ಶ್ರಾವಣ ಮಾಸದ ಒಂದು ತಿಂಗಳು ನಿಜಗುಣ ಶಿವಯೋಗಿಗಳ "ಕೈವಲ್ಯ ಪದ್ಧತಿ" ಯನ್ನು ಕುರಿತು ಪ್ರವಚನ ಮಾಡತೊಡಗಿದರು.

‡ ‡ ‡ ‡ ‡

ಹೊಸ ಮಠದ ಕೆಲಸವನ್ನು ಫಾಲಲೋಚನರು ಹೊತ್ತಿದ್ದರು. ಸರ್ಪಭೂಷಣರು ಮಾತ್ರ ಯಾವಾಗಲೋ ಒಮ್ಮೆ ಹೋಗಿ ನಿರ್ದೇಶನ ಕೊಡಲು ಹೋಗುತ್ತಿದ್ದರು. ಅಂದು ಪಾಲಲೋಚನರ ಹಿಂಸೆಯಿಂದ ಹೊಸ ಮಠದತ್ತ ಬಂದಿದ್ದರು.

ಪ್ರಭುಸ್ವಾಮಿಗಳು ಪ್ರಶ್ನಿಸಿದರು—

"ಹೊಸ ಮಠಕ್ಕೆ ಯಾವಾಗ ಹೋಗುತ್ತೀರಿ ಬುದ್ದಿ ?"

"ಇನ್ನೊಂದು ವಾರಕ್ಕೆ."

"ಮತ್ತೆ ಇನ್ನು ಮಠ ಪೂರ್ತಿ ಆಗಬೇಕಾದರೆ ನಾಲಕ್ಕಾರು ತಿಂಗಳೇ ಬೇಕಾಗುತ್ತದೆ ಅಂತ ಹೇಳಿದ್ರು ಪಾಲಲೋಚನರು"

"ಏನು ನಿಮಗೆ ಇನ್ನೂ ಅರ್ಥವಾಗಲಿಲ್ಲವೇ? ನಿಮ್ಮೊಡನೆ ನಾನಿರ ಬೇಕಾದರೂ ಒಂದೇ ವಾರ"

"ಅಂದರೆ...."

"ನನ್ನೂರಿಗೆ ಪ್ರಯಾಣ, ಅದಕ್ಕೋಸ್ಕರ ನೀವು ನನ್ನ ಜೊತೆಯಲ್ಲಿದ್ದು ತತ್ತ್ವಗೋಷ್ಠಿಗಳಲ್ಲಿ ನಿರತರಾಗಿ, ಈ ನನ್ನ ಕೊನೆ ದಿನಗಳಲ್ಲಾದರೂ ಒಟ್ಟಾಗಿ ಇರೋಣ ಅಂತ ಹೇಳ್ತಾ ಇರೋದು"

"ಈ ಮಾತನ್ನು ಕೇಳಿದ ಅವರು ಕುಸಿದರು, ಪ್ರಭುಸ್ವಾಮಿಗಳು ಸ್ವಲ್ಪ ಚಿಂತಿಸಿ. "ಅದಕ್ಕೇನಂತೆ...ತಾವು ಹೇಳಿದುದು ಹೆಚ್ಚೋ...ನಾನು ಇರುವುದು ಹೆಚ್ಚೋ ಅಗತ್ಯವಾಗಿ...."

"ಏಕೆ ಇಬ್ಬರೂ ಯೋಚನೆ ಮಾಡ್ತಾ ನಿಂತ್ರಿ. ಅದಕ್ಕೆಲ್ಲಾ ಭಯ ಏಕೆ? ಪ್ರಪಂಚದ ಆಟವೇ ಅಷ್ಟು......ಸರಿ ನಡೆಯಿರಿ....ಹೊತ್ತಾಯಿತು. ಸ್ನಾನ ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸೋಣ"

ಎಂದು ಸರ್ಪಭೂಷಣರು ಮುಂದಾದರು ಪಾಲಲೋಚನರು ಪ್ರಭು ಸ್ವಾಮಿಗಳು ಅವರನ್ನು ಹಿಂಬಾಲಿಸಿದರು.

‡ ‡ ‡ ‡ ‡

ಕ್ರಿ. ಶಕ ೧೮೩೯ ನೇ ವರ್ಷದ ಒಂದು ದಿನ. ಗುಡೇಮಾರನಹಳ್ಳಿ ಕೆಂಗೆರೆಪಟ್ಟನ ಮಲ್ಲಿಕಾರ್ಜುನಪ್ಪ. ರೊಟ್ಟಿ ರುದ್ರಪ್ಪ, ಎಲ್ಲರೂ ಮಠದ ಕಾರ್ಯದಲ್ಲಿ ತೊಡಗಿದ್ದು ಪಾಲಲೋಚನ ಸ್ವಾಮಿಗಳು ಯಾವುದೋ ನಿರ್ದೇಶನದಲ್ಲಿರಲು ಅಲ್ಲಿಗೆ ಸರ್ಪಭೂಷಣ ಶಿವಯೋಗಿಗಳು ಬಂದರು. ಎಲ್ಲರ ಕರ್ಮವನ್ನು ನೋಡುತ್ತಾ ನಿಂತಿರಲು ಪಾಲಲೋಚನ ಸ್ವಾಮಿಗಳು ಬಂದು "ಹೇಗಿದೆ ಬುದ್ಧಿ?" ಎಂದರು.

"ಅಲ್ಲ ಫಾಲಲೋಚನ ಸ್ವಾಮಿಗಳೇ ಇನ್ನೊಂದು ವಾರದೊಳಗೆ ಮಠದ ಕಳಶವೇ ಕಳಿದು ಹೋಗುತ್ತದೆ, ಇಷ್ಟೊಂದು ಶ್ರಮ ಏತಕ್ಕೆ?"

ಎನ್ನಲು ಪಾಲ ಲೋಚನ ಸ್ವಾಮಿಗಳ ಮುಖ ಪೆಚ್ಚಾಯಿತು.

"ಬುದ್ಧೀ...." ಎಂದು ಹಾಗೆಯೇ ಕುಳಿತರು ಆಗ ಸರ್ಪಭೂಷಣರು.

"ಬಾರದು ಬಪ್ಪದು--ಬಪ್ಪದು ತಪ್ಪದು ಅದಕ್ಕೆ ಚಿಂತೆ ಮಾಡಲೇ ಬಾರದು"

—ಎಂದು ಮಠದೊಳಕ್ಕೆ ನಡೆದರು. ಪಾಲಲೋಚನ ಸ್ವಾಮಿಗಳೂ ಅವರ ಹಿಂದೆ ಯೋಚನಾ ಮಗ್ನರಾಗಿ ನಡೆಯಲಾರಂಭಿಸಿದರು. ಮಿಕ್ಕವರೆಲ್ಲಾ ಈ ಮಾತನ್ನು ಕೇಳಿ ದಂಗಾಗಿ ನಿಂತಿದ್ದು ಗುರುಗಳ ಐಕ್ಯವಾಗುವ ವಿಚಾರ ತಿಳಿದು ಊರಿಗೆ ಹೋಗಬೇಕಾದುದನ್ನು ನಿಲ್ಲಿಸಿದರು.

‡ ‡ ‡ ‡ ‡

ವಾರ ಮುಗಿಯುತ್ತಿದ್ದಂತೆಯೇ ಶುಭ ದಿನದಂದು ಸರ್ಪಭೂಷಣರು ಕೈಲಾಸವಾಸಿಯಾದರು.

ಗುರು ಸರ್ಪಭೂಷಣ ಶಿವಯೋಗಿಗಳು ಶಿವೈಕ್ಯರಾದರು ಎಂಬ ವಿಷಯ ಬೆಂಗಳೂರು ಸುತ್ತ ಮುತ್ತಲ ಗ್ರಾಮಗಳ ಭಕ್ತರಿಗೆ ತಿಳಿದು ಅದಷ್ಟು ಜನರು ಗುರುಗಳ ಅಂತ್ಯ ದರ್ಶನವನ್ನು ಪಡೆದರು. ಬೇರೆ ಬೇರೆ ಊರುಗಳಿಂದ ಭಕ್ತರುಗಳು ಕೈಲಾಸ ಸಮಾರಾಧನೆಗೆ ಬರತೊಡಗಿದರು. ಗುರುಗಳ ಅತ್ಯಂತ ಆಪ್ತರಾದ ಗದುಗಿನ ಅರಳೆ ವ್ಯಾಪಾರಿ ಬುಳ್ಳಪ್ಪ ಶೆಟ್ಟರು ನಿಂತು ಗಣಾರಾಧನೆಯನ್ನು ಮಾಡಲಾರಂಭಿಸಿದರು. ಸರ್ಪಭೂಷರ ಪೂರ್ವಾಶ್ರಮದ ಅಣ್ಣಂದಿರು ಅಕ್ಕ ಎಲ್ಲರೂ ಬಂದು ಕಾರ್ಯದಲ್ಲಿ ನಿರತರಾದರು. ಅನೇಕ ಭಕ್ತರು ಅನೇಕ ರೀತಿಯ ಮಾತುಗಳನ್ನಾಡಿ ಕೊಳ್ಳುತ್ತಿದ್ದುದು ಸಹಜವೇ ಆಗಿತ್ತು.

"ಗುರುಗಳು ನಲವತ್ತೈದು ವರ್ಷಕ್ಕೆ ಹೋಗಬಾರದಿತ್ತು."

"ನೂರ ವರ್ಷಗಳು ಇದ್ದಿದ್ದರೆ ಇನ್ನೆಷ್ಟು ಕೃತಿಗಳನ್ನು ರಚಿಸುತ್ತಿದ್ದಿರೋ ಏನೋ."

"ಎಲೆ ಮರೆಯ ಕಾಯಾಗಿ, ಗವಿಯ ಮರೆಯ ಶಾಖದಂತೆ, ಹೂವಿನ ಗಂಧದ ರೀತಿ ಇದ್ದು ಶಿವ ಸಾಯುಜ್ಯ ಪಡೆದರು."

ಇನ್ನೂ ಏನೇನೋ ಮಾತುಗಳು.

ಸರ್ಪಭೂಷಣ ಶಿವಯೋಗಿಗಳ ಗದ್ದುಗೆಯಲ್ಲಿ ಪೂಜೆ ಘಂಟಾನಾದ, "ಸರ್ಪಭೂಷಣರಿಗೆ ಉಘೇ...ಉಘೇ... ಜೈ...ಜೈ..." ಎಂಬ ಝೇಂಕಾರ ಪೂಜೆ, ಜನರಿಗೆ ಪ್ರಸಾದ ವಿನಿಯೋಗ !

ಸರ್ಪಭೂಷಣರು ಶಿವೈಕ್ಯರಾದರೆಂಬ ದುಃಖ ಕೆಲವರಿಗಾದರೆ ಕೆಲವರಿಗೆ ಲಿಂಗವಾದರು ! ದೇವರಿಗೆ ಸಮ ಎಂಬ ಮಹಾಭಾವನೆ, ಮಹಾ ಭಕ್ತಿ! ಯೊಂದಿಗೆ ಪೂಜೆಗೆ ತೊಡಗಿದರು.

ಅವರ ಕೃತಿಗಳ ಪಠಣ, ಪ್ರವಚನ, ಪೂಜೆ ! ನಿರಂತರವಾಗಿ ಜನರ ದರ್ಶನ ! ಮಹಾನುಭಾವಿ ಸರ್ಪಭೂಷಣರ ಪುಣ್ಯತಿಥಿಯ ಆಚರಣೆ ಭಕ್ತಾದಿಗಳಿಂದ, ಗುರುಗಳಿಂದ, ಅದ್ಧೂರಿಯಿಂದ ನಡೆಯುವಾಗ ಎಲ್ಲರಿಗೂ ಅವರ ಮತ್ತು ಅವರ ಕೃತಿಯ ಮಾತೇ ಆಯ್ತು !

‡ ‡ ‡ ‡ ‡

---



ಗ್ರಂಥ ಮುದ್ರಣಕ್ಕೆ ಉದಾರ ದಾನ ನೀಡಿದ
ಶ್ರೀಮಾನ್ ಕೆ. ಬಿ. ದೊಡ್ಡರಾಜಪ್ಪ ಮತ್ತು
ಅವರ ಧರ್ಮಪತ್ನಿ ಶ್ರೀಮತಿ ಭಾಗೀರಥಮ್ಮ
ಮಾಮೂಲ್‌ಪೇಟೆ ಬೆಂಗಳೂರು.

# ಹಿನ್ನುಡಿ

ಶರಣರ, ಕವಿಗಳ, ಮಹಾಪುರುಷರ ವಿಷಯವೆಂದರೆ ನನಗೆ ಬಹಳ ಅಚ್ಚು ಮೆಚ್ಚು. ಅವರ ಬಗ್ಗೆ ತಿಳಿದುಕೊಳ್ಳುವುದು, ಅವರ ಮೇಲೆ ಕೃತಿ ರಚಿಸುವುದು ನನ್ನ ವಾಡಿಕೆ. ಕ್ರಿ. ಶ. ೧೭೯೫–೧೮೩೮ ರಲ್ಲಿ ಇದ್ದ "ತತ್ತ್ವ ಜ್ಞಾನಿ ಸರ್ಪಭೂಷಣ ಶಿವಯೋಗಿಗಳು" ಜೀವನ ಚರಿತ್ರೆಯನ್ನು ರಚಿಸಲು ಸ್ಫೂರ್ತಿ ಇತ್ತವರು ಸರ್ಪಭೂಷಣ ಶಿವಯೋಗಿಗಳ ಮಠದ ಈಗಿನ ಸ್ವಾಮಿಗಳವರಾದ ಶ್ರೀಮಾನ್ ನಿರಂಜನ ಪ್ರಣವ ಸ್ವರೂಪಿಗಳಾದ ಶಿವಕುಮಾರ ಸ್ವಾಮಿಗಳು.

ಮಹಾತ್ಮರೆನಿಸಿಕೊಂಡಮೇಲೆ ಆತನ ಹುಟ್ಟು ನೆಲ, ಬೆಳೆದ ಪರಿಸರ, ತಂದೆ, ತಾಯಿ, ಗುರು, ಸ್ನೇಹಿತರ ಬಗ್ಗೆ ಅನ್ವೇಷಣೆಗೆ ಆಕಾಂಕ್ಷೆಯಾಗುತ್ತದೆ. ಹಿಂದಿನವರು ಅವರ ಬಗ್ಗೆ ಬರೆದ ಸಾಹಿತ್ಯವಿದ್ದರೆ ಎಷ್ಟೋ ಸಹಾಯವಾಗುತ್ತದೆ. ಇಲ್ಲದಿದ್ದರೆ ಅವರು ಜನಿಸಿ ನೂರಾರು ವರ್ಷಗಳು ಕಳೆದ ಮೇಲೆ ಹುಡುಕುವುದು ಬಹಳ ಶ್ರಮದ ಕೆಲಸವೇ ಸರಿ. ಅದರ ಬಗ್ಗೆ ಯಾರನ್ನಾದರೂ ಕೇಳಿದರೆ ಅವರೇ ? ಅವರ್ಯಾವ ಊರು ? ಎಂದು ನಮಗೇ ಪ್ರಶ್ನಿಸುವವರೇ ಹೆಚ್ಚು. ಇಂದು ಮಹಾತ್ಮರ ಜೀವನದ ಬಗ್ಗೆಯಾಗಲೀ, ಕೃತಿಯ ಬಗ್ಗೆಯಾಗಲಿ ತಿಳದುಕೊಳ್ಳಬೇಕು ಎಂಬ ಹಂಬಲವೇ ನೂರಕ್ಕೆ ಹತ್ತು ಭಾಗ ಸಿಗುವುದೂ ದುರ್ಲಭವೇ ಆಗಿದೆ. ಅಂಥ ಸಂದರ್ಭದಲ್ಲಿ ಜನರಿಗೆ ಶರಣರ ಬಗ್ಗೆ ಅವರ ಜೀವನ ಕಲೆ ಕೃತಿಗಳ ಬಗ್ಗೆ ತಿಳಿಸಬೇಕೆಂಬ ಹೃದ್ಗತದಿಂದ ಈ ಕೃತಿಯನ್ನೂ ಕನ್ನಡಿಗರ ಮುಂದೆ ಇಡುತ್ತಿದ್ದೇನೆ. ಜನರು ಒಬ್ಬರ ಬಾಯಿಂದ ಒಬ್ಬರಿಗೆ ಹೇಳಿದ ಕತೆಗಳ ಅಂದರೆ ಜಾನಪದ ಕತೆಗಳ ಆಧಾರದಮೇಲೆ ಇತ್ತೀಚಿನ ಕೆಲವು ಕವಿಗಳು, ಲೇಖಕರು ಈ ಮಹಾ ಮಹಿಮ ಪುರುಷನ ಜೀವನ ಚರಿತ್ರೆಯನ್ನು ತಾವು ಕೇಳಿ ತಿಳಿದು ಕೆಲವು ಹಳೆಯ ತಾಳೆ ಓಲೆಗಳಲ್ಲಿ ದೊರೆತ ವಿಷಯಗಳ ಆಧಾರದ ಮೇಲೆ ಇವರ ಜೀವನವನ್ನು ಸಂಕ್ಷಿಪ್ತವಾಗಿ ಕೊಟ್ಟಿದ್ದಾರೆ. ಇವುಗಳಿಗೆ ಸಂಶೋಧನೆ

ಆಗತ್ತ. ಆದರೆ ನಾವು ಮಾಡಿದ ಪ್ರಯತ್ನಗಳು ಸಾಫಲ್ಯವಾಗಲೇ ಇಲ್ಲ. ಅವರ ಬಗ್ಗೆ ಹೆಚ್ಚಿಗೆ ವಿಷಯಗಳು ದೊರೆಯಲಿಲ್ಲ. ಅನುಮಾನಗಳ ಮೇಲೆ ಅನುಮಾನಗಳು ಅಂಕುರಿಸಿದುವು.

ಸರ್ಪಭೂಷಣರು ಹುಟ್ಟಿದ ಊರು ಯಾವುದು ? ಇದು ನಮ್ಮ ಮುಂದೆ ನಿಂತ ಮೊದಲ ಪ್ರಶ್ನೆ. ಇದಕ್ಕೆ ಉತ್ತರ ಹುಡುಕಲು ಸ್ಥಳಾನ್ವೇಷಣೆಗಳು ನಡೆಯಲಾರಂಭಿಸಿದುವು. ಕರ್ನಾಟಕ ರಾಜ್ಯದಲ್ಲಿ ಹಲವಾರು ಬಾಣಾವರಗಳು ನಮಗೆ ಕಂಡುವು. ಬೆಂಗಳೂರು ತುಮಕೂರಿನ ರಸ್ತೆಯ ಕಡೆ ಇರುವ ಚಿಕ್ಕ ಬಾಣಾವರ, ಬೆಂಗಳೂರಿನ ಸಮೀಪದ ಮತ್ತೊಂದು ಬಾಣಾವರ, ಇನ್ನೊಂದು ಕಡೂರಿನ ಹತ್ತಿರವಿರುವ ದೊಡ್ಡ ಬಾಣಾವರ. ನಾನು ತುಮಕೂರಿನ ಹತ್ತಿರದ ಚಿಕ್ಕಬಾಣಾವರವೇ ಇರಬೇಕೆಂದು ಊಹಿಸಿ ಮಿತ್ರ ಆರ್. ಶಿವಣ್ಣನವರೊಡನೆ ಸ್ಕೂಟರ್‌ನಲ್ಲಿ ಹೊರಟೆ ಟಾರು, ಮಣ್ಣು, ರಸ್ತೆಗಳಹಳ್ಳ, ತಿಟ್ಟುಗಳನ್ನು ದಾಟಿ ಬಹಳ ಶ್ರಮದಿಂದ ಊರನ್ನು ತಲುಪಿದೆವು. ದಾರಿಯಲ್ಲಿ ಇಬ್ಬರನ್ನು ವಿಚಾರಿಸಿದೆವು. ಊರಿಗೆ ಹೋಗುವ ರಸ್ತೆ ಮತ್ತು ಅದರ ಬಗ್ಗೆ ಯಾರಾದರೂ ಜನರಿಗೆ ತಿಳಿದಿದೆಯೋ ಎಂಬ ವಿಷಯವನ್ನು ಕೇಳಲು ಆತ "ನನಗೆ ಗೊತ್ತಿಲ್ಲ. ಊರ ಪಂಚಾಯ್ತಿ ಚೇರ್‌ಮನ್ ಕೇಳಿದ್ರೆ ಗೊತ್ತಾಗಬಹುದು ಬುದ್ಧಿ" ಎಂದ. ಸರಿ ಊರ ಹತ್ತಿರ ಪಡಸಾಲೆಯ ಮೇಲೆ ಕುಳಿತಿದ್ದ ಗೌಡರನ್ನು ವಿಚಾರಿಸಲು ಊರಿನಲ್ಲಿ ಒಬ್ಬರು ವಯಸ್ಸಾದ ಲಿಂಗಾಯಿತರು ಇದ್ದಾರೆ. ಅವರನ್ನು ನೀವು ವಿಚಾರಿಸಿದ್ರೆ ಗೊತ್ತಾಗಬಹುದು. ನಮಗಂತೂ ತಿಳಿದಾಗ್ಗೆ ಅವರು ಇಲ್ಲಿರೋದು ಗೊತ್ತಿಲ್ಲ. ಎಷ್ಟು ವರ್ಷದ ಮಾತಾಗೋಯ್ತು ಸ್ವಾಮಿ. ಮಹಾದೇವ ಸ್ವಾಮಿಗಳೇನೋ ಇಲ್ಲೊಂದು ಮಠ ಮಾಡಿದ್ರು ಸ್ವಲ್ಪ ಜಮೀನು ಮಾಡಿದ್ರು. ಅದನ್ನ ನೋಡ್ಕೊಳೋಕೆ ಒಬ್ಬರು ಸ್ವಾಮಿಗಳನ್ನು ಇರಿಸಿದ್ರು. ಅವರಿಬ್ಬರಿಗೂ ಏನೋ ಮನಸ್ತಾಪವಾಗಿ ಅವರು ಊರು ಬಿಟ್ಟು ಹೊರಟೋದ್ರು. ಇಲ್ಲೇ ಸ್ವಲ್ಪ ದೂರದಲ್ಲಿ ಮಠ ಮಾಡ್ಕೊಂಡಿದ್ದಾರೆ. ಎಂದು ಅದಕ್ಕೆ ಸಂಬಂಧವಿಲ್ಲದ ವಿಚಾರಗಳನ್ನು ಹೇಳಿದುದು ನಮಗೆ ಬೇಕಿರಲಿಲ್ಲ. ಆದರೆ ಅವರ ಮಾತಿನಿಂದ ಒಂದು ಖಚಿತವಾಗುತ್ತದೆ. ಅಲ್ಲಿನ ಭಕ್ತರು ಜಮೀನು ಮಠ ಮಾಡಬೇಕಾಗಿದ್ದರೆ ಸರ್ಪಭೂಷಣರು ಅಲ್ಲಿನ ಚಿಕ್ಕ ಬಾಣಾವರದವರೇ ಇರಬೇಕು ಅಂತ.

ನಂತರ ಲಿಂಗಾಯಿತರ ಮನೆಗೆ ಹೋದೆವು. ಎಪ್ಪತ್ತೈದು ಎಂಭತ್ತು ವರ್ಷದ ಮುದುಕರು ನಮ್ಮನ್ನು ಅವರ ಮನೆಗೆ ಹೋದಂತೆಯೇ ಸ್ವಾಗತಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಕಾಫಿ ಬಂತು. ಕುಡಿಯುತ್ತಾ ಮಾತನಾಡಲಾರಂಭಿಸಿದೆವು. ಅವರೂ ಸಹ "ಇಲ್ಲಿ ಅವರಿರಲಿಲ್ಲ. ಬೇಕಾದರೆ ನಮ್ಮೂರಿನಲ್ಲಿ ತುಂಬಾ ವಯಸ್ಸಾದ ಮುದುಕಿ ಇದ್ದಾರೆ. ಅವರನ್ನು ಕರೆಸುತ್ತೇನೆ ಎಂದು ಕರೆಸಿ ಕೇಳಿದರು ಅವರು "ಇಲ್ಲ" ಎಂದರು. ಏಕೆಂದರೆ ನೂರೆಪ್ಪತ್ತೊಂಭತ್ತು ವರ್ಷಗಳ ವಿಷಯ ಅಷ್ಟಾಗಿ ಆ ಊರ ಜನರ ಮನದಲ್ಲಿ ಬೇರೂರಿರಲಿಲ್ಲವೋ ಎನ್ನಿಸುತ್ತದೆ.

ಶ್ರೀ ಸಿಂಪಿ ಲಿಂಗಣ್ಣನವರ " ಜೀವನ ಕಲೆ " ಎಂಬ ಪುಸ್ತಕದಲ್ಲಿ ಬೆಂಗಳೂರು ತುಮಕೂರು ರಸ್ತೆಯ ಹತ್ತಿರದ ಚಿಕ್ಕ ಬಾಣಾವರ ಎಂದೇ ಹೇಳಿದ್ದಾರೆ ಅಲ್ಲದೆ "ಕೈವಲ್ಯ ಕಲ್ಪವಲ್ಲರಿ" ಮುನ್ನುಡಿಯಲ್ಲಿ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ಇವರ ಜೀವನ ಚರಿತ್ರೆಯನ್ನು ಸಂಗ್ರಹಿಸಿ ಹೇಳಿರುವುದೂ ಬೆಂಗಳೂರಿನ ಹತ್ತಿರದ ಚಿಕ್ಕ ಬಾಣಾವರ ಎಂದು ಹೇಳುವುದರಿಂದ ನಾವು ಇದನ್ನೇ ಅವರ ಹುಟ್ಟು ಸ್ಥಳವೆಂದು ಖಚಿತಪಡಿಸಬಹುದು.

ಮತ್ತೊಂದು! ಅನುಮಾನ ಅಂಕುರಿಸಿದುದು ಶ್ರೀ ಶಿವಮೂರ್ತಿ ಶಾಸ್ತ್ರಿಗಳು "ವೀರಶೈವ ಮಹಾ ಪುರುಷರು" ಎಂಬ ಹೊತ್ತಿಗೆಯಲ್ಲಿ ಸರ್ಪಭೂಷಣರ ತಾಯಿಯವರ ಹೆಸರನ್ನು ಮಹದೇವಮ್ಮ ಎಂಬುದಾಗಿ ಹೇಳಿದ್ದಾರೆ. ಕೈವಲ್ಯ ಕಲ್ಪವಲ್ಲರಿಯಲ್ಲಿನ ಮುನ್ನುಡಿಯಲ್ಲಿ ಚೆನ್ನಮ್ಮ ಎಂಬ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ಹಳೆಯ ಆಧಾರಗಳ ಮೇಲೆ ರಚಿಸಿರುವುದರಿಂದ ಅದೇ ಸರಿ ಎಂದು ಹೇಳಬಹುದು.

ಈ ಹೊತ್ತಿಗೆಯನ್ನು ಸಿದ್ಧಪಡಿಸಲು ನಾನು ಶ್ರೀ ಶಿವಮೂರ್ತಿ ಶಾಸ್ತ್ರಿಗಳು ರಚಿಸಿರುವ "ವೀರಶೈವ ಮಹಾ ಪುರುಷರು" ಎಂಬ ಪುಸ್ತಕದಲ್ಲಿ ಬರೆದಿರುವ "ಸರ್ಪಭೂಷಣರ ಜೀವನ ಚರಿತ್ರೆ" ಯನ್ನು ಉಪಯೋಗಿಸಿಕೊಂಡಿರುವೆ ಅವುಗಳಲ್ಲಿ ಕಾಲಕ್ಕೆ ತಕ್ಕಂತೆ ಕೆಲವು ಪವಾಡಗಳನ್ನು ನನ್ನದೇ ರೀತಿಯಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡಿದ್ದೇನೆ. ಅವರೇ ಸಂಪಾದಿಸಿ ಸಂಗ್ರಹಿಸಿರುವ "ವೇದಾಂತ ಶಿಖಾರತ್ನ" ದ ಕೆಲವು ವಚನಗಳನ್ನು ಅಲ್ಲದೆ ಅತಿ ಶ್ರಮದಿಂದ

"ಕೈವಲ್ಯ ಕಲ್ಪವಲ್ಲರಿ" ಅಲ್ಲಿನ ಮುನ್ನುಡಿಗಳನ್ನು ಉಪಯೋಗಿಸಿಕೊಂಡು ಈ ಪುಸ್ತಕವನ್ನು ಕಲಾತ್ಮಕವಾಗಿ ರಚಿಸಲು ಪ್ರಯತ್ನಪಟ್ಟಿರುವೆ. ಅತಿಯಾಗಿ ಬೆಳೆಸುವುದರಿಂದ ಓದುಗರ ವ್ಯವಧಾನ ಕಡಿಮೆ ಆಗಬಹುದೋ ಏನೋ ಎಂಬ ಅನುಮಾನದಿಂದ ಆದಷ್ಟು ಸಂಕ್ಷಿಪ್ತವಾಗಿಯೇ ರಚಿಸಿರುವೆ. ಇದರಲ್ಲಿ ಕಾಲಕ್ಕೆ ತಕ್ಕಂತೆ ಆದಷ್ಟು ಪವಾಡಗಳಿಗೆ ಎಡೆಗೊಡದೆ ಸರ್ಪಭೂಷಣ ಶಿವಯೋಗಿಗಳು ಶಿವಯೋಗಿಗಳು ಸಂನ್ಯಾಸಿ, ಎಂಬ ಭಾವನೆಗಿಂತ ಕವಿಯಾಗಿ, ತತ್ತ್ವಜ್ಞಾನಿಯಾಗಿ ಈ ಹೊತ್ತಿಗೆಯುಲ್ಲಿ ಸೃಷ್ಟಿಸುವ ಪ್ರಯತ್ನ ಸಾಗಿದೆ. ಕೆಲವು ಹೆಸರುಗಳನ್ನು ಈ ಪುಸ್ತಕದಲ್ಲಿ ಸಂದರ್ಭೋಚಿತವಾಗಿಯೂ ಕಾಲ್ಪನಿಕವಾಗಿಯೂ ಉಪಯೋಗಿಸಿಕೊಂಡಿದ್ದೇನೆ. ಈ ಪುಸ್ತಕ ರಚನೆಯಾಗುವಾಗ ಅನೇಕರ ನೆರವು ದೊರೆತಿದೆ. ಅವರೆಲ್ಲರಿಗೂ ನಾನು ಕೃತಜ್ಞ. ಇಷ್ಟೆಲ್ಲಾ ದೊರಕಬೇಕಾದರೂ ಬೇಕಾದಷ್ಟು ಶ್ರಮವನ್ನು ವಹಿಸಿರುವೆ ಎಂದೇ ಹೇಳಬಹುದು. ಪುಸ್ತಕದ ಬಗ್ಗೆ ವಿಮರ್ಶೆ ಯಾವಾಗಲೂ ಸ್ವಾಗತಾರ್ಹ !

ಈ ಪುಸ್ತಕದ ರಚನೆಯಲ್ಲಿ ಸೂಕ್ತ ಸಲಹೆಗಳನ್ನಿತ್ತ ಪಂಡಿತ ಶ್ರೀ ಕೆ.ಪಿ. ಶಿವಲಿಂಗಯ್ಯನವರಿಗೆ ನನ್ನ ವಂದನೆಗಳು.

ಶ್ರೀ ಮಠದ ಪೂಜ್ಯ ಸ್ವಾಮಿಗಳವರು ಸಹ ಕೆಲವು ಸಲಹೆಗಳನ್ನಿತ್ತು ಜೀವನ ಚರಿತ್ರೆಯಲ್ಲಿ ತಪ್ಪುಗಳು ಬಾರದಂತೆ ಆಶೀರ್ವದಿಸಿ ಪ್ರಕಟಿಸಿರುವುದಕ್ಕೆ ನಾನು ತುಂಬಾ ಅಭಾರಿಯಾಗಿದ್ದೇನೆ.

ಈ ಹೊತ್ತಿಗೆಯನ್ನು ಪಂಡಿತ ನಾಗಭೂಷಣ ಶಾಸ್ತ್ರಿಗಳವರೂ ಸಹ ಓದಿಸಿ ಕೇಳಿ ಸೂಕ್ತ ಸಲಹೆಗಳನ್ನಿತ್ತುದಕ್ಕಾಗಿ ನನ್ನ ಅನಂತ ಪ್ರಣಾಮಗಳು. ಗ್ರಂಥ ರಚನೆಯಲ್ಲಿ ನೆರವು ನೀಡಿದ ಎಲ್ಲರಿಗೂ ನನ್ನ ಹೃತ್ಪೂರ್ವಕಗಳು.

ಬಿ. ಎಸ್. ಸ್ವಾಮಿ

## ಲೇಖಕರ ಪ್ರಕಟಿತ ಕೃತಿಗಳು

| | |
|---|---|
| ಅಮೃತ | (ಕವನ ಸಂಕಲನ) |
| ಇಂಚರ | ( " ) |
| ಮುಂಬೆಳಕು | ( " ) |
| ಮಧುಮತಿ | ( ಕಾದಂಬರಿ ) |
| ಕವಿಚಕ್ರೇಶ್ವರ | ( " ) |
| ಪ್ರೇಮ ಪರಾಗ | ( " ) |
| ರಸಿಕ ಚಕ್ರಿ | ( " ) |
| ತತ್ತ್ವಜ್ಞಾನಿ ಸರ್ಪಭೂಷಣ ಶಿವಯೋಗಿ | ( " ) |
| ರೇವಣ ಸಿದ್ಧ | (ಜೀವನ ಚರಿತ್ರೆ) |
| ಕಾರಂಜಿ | (ಹಾಸ್ಯ ಲೇಖನಗಳು) |
| ದೊಡ್ಡ ಆಲದ ಮರ | (ಪ್ರವಾಸಿಗರ ಕೈಪಿಡಿ) |

ಬಾನುಲಿಯ ಮೂರು ನಾಟಕಗಳು

ಮೂರು ನಾಟಕಗಳು

ಸಿದ್ಧೇಶ್ವರ ಕ್ಷೇತ್ರ ಮಹಾತ್ಮ್ಯ

Rs 15/00